ಇಂಥ ಜಗತ್ತಿನ ತತ್ತ್ವವನ್ನು ತನ್ನ ಒಂದು ಸಣ್ಣ ತೆಂಗಿನಕಾಯಿ ಗಾತ್ರದ ತಲೆಯಲ್ಲಿ ಅಡಗಿಸಿಕೊಳ್ಳಬೇಕೆನ್ನುವ ಮನುಷ್ಯನೇ ಒಂದು ಅದ್ಭುತಸೃಷ್ಟಿ. ಭೋಗ್ಯವಸ್ತುಗಳಿರಲಿ, ಅನ್ನ ನೀರನ್ನೂ ಬಿಟ್ಟು ಈ ತತ್ತ್ವದ ಪರಿಶೀಲನೆಯಲ್ಲಿ ಮಗ್ನರಾಗುವ ತಾತ್ತ್ವಿಕರೂ ಉಂಟು. "ಈ ಭೂಮಿಯ ಆಚೆ ಏನಿದೆ? ಅದರ ಆಚೆ ಏನಿದೆ? ಇನ್ನೂ ಆಚೆಗೆ? ಇನ್ನೂ, ಇನ್ನೂ ಆಚೆಗೆ? . . ." ಎಂದು ಪರಮ ಕುತೂಹಲದಿಂದ ಹಲವು ವೇಳೆ ಚಿಕ್ಕ ಚಿಕ್ಕ ಹುಡುಗರೂ ಕೇಳುತ್ತಾರೆ. ಈ ಕುತೂಹಲವನ್ನು ಅಡಗಿಸುವುದು ಹೇಗೆ?

ಇಂದಿನ ವ್ಯಾಸಂಗ ಕ್ರಮದಲ್ಲಿ ಪ್ರಪಂಚದ ಎಲ್ಲಾ ವಿಶ್ವವಿದ್ಯಾನಿಲಯಗಳಲ್ಲಿಯೂ ತತ್ತ್ವ ಜ್ಞಾನಕ್ಕೆ ಪ್ರಾಶಸ್ತ್ಯ ಕಡಮೆಯಾಗಿದೆ. ಆದರೂ ಸಾಧಾರಣವಾಗಿ ಪ್ರತಿಯೊಬ್ಬನ ಜೀವನದಲ್ಲಿಯೂ ಒಂದಲ್ಲ ಒಂದು ಸಾರಿ ತತ್ತ್ವಚಿಂತನೆಯ ಕಡೆಗೆ ಮನಸ್ಸು ತಿರುಗುತ್ತದೆ. ಆಗ ಮಿಕ್ಕದ್ದೆಲ್ಲವೂ ಪೊಳ್ಳಾಗಿ ಕಾಣುತ್ತದೆ. ಮನುಷ್ಯನು ಸತ್ತ ಮೇಲೆ ಏನಾದರೇನು? ಇದ್ದರೇನು, ಇಲ್ಲದಿದ್ದರೇನು? ಆದರೂ ಹುಡುಗನಾದ ನಚಿಕೇತನಿಗೆ ಅದೇ ದೊಡ್ಡದಾಯಿತು. ಈ ಸಂದರ್ಭದಲ್ಲಿ 'ಚತುರ್ವಿಧಾ ಭಜಂತೇ ಮಾಂ ಜನಾಸ್ಸುಕೃತಿನೋऽರ್ಜುನ| ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ||' ಎಂಬ ಗೀತಾ ವಾಕ್ಯವು ಜ್ಞಾಪಕಕ್ಕೆ ಬರುತ್ತದೆ; ಕೇವಲ ಕುತೂಹಲ ಸಂತೃಪ್ತಿಯೇ ಅಲ್ಲ, ಅನಿಷ್ಟ ನಿವಾರಣೆ ಇಷ್ಟಪ್ರಾಪ್ತಿಗಳೇ ಅಲ್ಲ, ಇವುಗಳಿಗಿಂತ ಇನ್ನೂ ಘನವಾದ, ಪ್ರಬಲವಾದ, ಇನ್ನೇನೋ ಒಂದು ಶಕ್ತಿ ತತ್ತ್ವಾನುಸಂಧಾನದಲ್ಲಿ ಪ್ರವೃತ್ತಿಯುಂಟುಮಾಡುವುದೆನ್ನಿಸುತ್ತದೆ. ಆದ್ದರಿಂದ ತತ್ತ್ವಶಾಸ್ತ್ರವು ನಿಷ್ಪ್ರಯೋಜನವಾದದ್ದು, ಬರಿಯ ಕಂಠಶೋಷಣೆ, ನಮ್ಮ ಜೀವನಕ್ಕೆ ಸಂಬಂಧವೇ ಇಲ್ಲದ್ದು ಎಂಬುದನ್ನು ಒಪ್ಪುವುದಕ್ಕಾಗುವುದಿಲ್ಲ. ಬಾಹ್ಯವಾದ ಸುಖಜೀವನಕ್ಕೆ ವಿಜ್ಞಾನವೆಷ್ಟು ಆವಶ್ಯಕವೋ ಆಂತರವಾದ ಶಾಂತಜೀವನಕ್ಕೆ ತತ್ತ್ವಜ್ಞಾನವೂ ಅಷ್ಟು ಆವಶ್ಯಕ.[1] . . .

---

[1] ಶ್ರೀಮಾನ್ ಜಿ. ಹನುಮಂತರಾವ್, ಎಂ.ಎ., ಅವರ "ಆಧುನಿಕ ತತ್ತ್ವಶಾಸ್ತ್ರ ಸಮಸ್ಯೆಗಳು" ಎಂಬ ಗ್ರಂಥಕ್ಕೆ ಬರೆದಿರುವ ಮುನ್ನುಡಿಯಿಂದ ತೆಗೆದುಕೊಂಡದ್ದು.—೧೯೪೫.

# ದೇವೀಭಾಗವತ

## ೧

"ದೇವೀಭಾಗವತ"[1]ವೆಂದರೆ ದೇವಿಯ ಅಥವಾ ದೇವೀಭಗವತಿಯ ಮಹಿಮೆಯನ್ನು ತಿಳಿಸುವ ಗ್ರಂಥ. ಈ ದೇವಿ ಯಾರೆಂಬುದನ್ನು ಪ್ರೊಟ್ಟ ಮೊದಲೇ ಮಂಗಳಶ್ಲೋಕದಲ್ಲಿ ಸೂಚಿಸಿದೆ:—

> ಸರ್ವ ಚೈತನ್ಯ ರೂಪಾಂ ತಾಂ |
> ಆದ್ಯಾಂ ವಿದ್ಯಾಂ ಚ ಧೀಮಹಿ |
> ಬುದ್ಧಿಂ ಯಾ ನಃ ಪ್ರಚೋದಯಾತ್ ||[2]

ಆದಿಶಕ್ತಿಯೇ ಆ ದೇವಿ. ಅವಳಿಗೆ ಮೂಲಾವಿದ್ಯಾ, ಮಹಾಮಾಯಾ, ಪರಾಪ್ರಕೃತಿ, ಭುವನೇಶ್ವರೀ ಮುಂತಾದ ಹೆಸರುಗಳೂ ಉಂಟು. ಪರಬ್ರಹ್ಮದ ಶಕ್ತಿಯೇ ಆ ದೇವಿ ಎಂದು ಹೇಳಿದರೂ ಹೇಳಬಹುದು.

"ಪುರಾಣ"ವೆಂದರೆ ಹಿಂದಿನದು, ಹಳೆಯದು, ಪುರಾತನವಾದದ್ದು. ಪುರಾಣದಲ್ಲಿ ಹೇಳಿರುವ ವಿಷಯ ಬಹು ಹಿಂದಿನಿಂದ ತಿಳಿದುಬಂದಿರುವ ಸಂಗತಿಯಾದ್ದರಿಂದ ಅದಕ್ಕೆ ಈ ಹೆಸರು ಸಲ್ಲುತ್ತದೆ.

ರಾಮಾಯಣ ಭಾರತ ಭಾಗವತಗಳನ್ನು ಓದಿ ಅರ್ಥವಿವರಿಸುತ್ತಿದ್ದರೆ 'ಪುರಾಣ ಹೇಳುತ್ತಾರೆ" ಎನ್ನುವುದು ರೂಢಿ. ಇವುಗಳಲ್ಲಿ ನಿಜವಾಗಿ

---

[1] ಶ್ರೀ ದೇವೀಭಾಗವತ ಮಹಾಪುರಾಣಂ (ಸಂಸ್ಕೃತಮೂಲ, ಕನ್ನಡದಲ್ಲಿ ಅರ್ಥಾನುವಾದ ವಿವರಣೆಗಳೊಡನೆ) ಅನುವಾದಕರು; ಆಸ್ಥಾನ ಮಹಾವಿದ್ವಾನ್ ಎಡತೊರೆ ಚಂದ್ರಶೇಖರಶಾಸ್ತ್ರೀ, ಎಂ. ಎ., ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ, ಪುಷ್ಪರತ್ನ ಸಂಖ್ಯಾ ೫. ಸಂಪುಟಗಳು ೧-೧೧. ಡೆಮ್ಮಿ ಅಷ್ಟಪತ್ರ ಪುಟಗಳು ೪,೫೮೮. ಪ್ರಥಮ ಮುದ್ರಣ, ೧೯೪೩-೧೯೪೫. ಬೆಲೆ, ಹನ್ನೊಂದು ಸಂಪುಟಗಳಿಗೂ ಒಟ್ಟು ೩೫ ರೂಪಾಯಿ. ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್, ಮೈಸೂರು, ಮತ್ತು ಅಕ್ಷರ ಕೃಪಾ ಬುಕ್ ಡಿಪೋ, ಬೆಂಗಳೂರು ಸಿಟಿ, ಇವರಲ್ಲಿ ದೊರೆಯುತ್ತದೆ.

[2] ಇದು ಗಾಯತ್ರೀ ಛಂದಸ್ಸಿನಲ್ಲಿದೆ; ಮತ್ತು ಅರ್ಥದಲ್ಲಿ ಪ್ರಸಿದ್ಧವಾದ ಗಾಯತ್ರೀ ಮಂತ್ರವನ್ನು ಹೋಲುತ್ತದೆ.

ಪುರಾಣವೆಂಬ ಹೆಸರಿಗೆ ತಕ್ಕದ್ದು ಭಾಗವತ ಒಂದೇ. ರಾಮಾಯಣ ಭಾರತ ಗಳೆರಡನ್ನೂ ಬೇರೆ ಒಂದು ಗುಂಪುಮಾಡಿ ಅವುಗಳನ್ನು "ಇತಿಹಾಸ" ಗಳೆಂದು ಕರೆಯುತ್ತಾರೆ. ಇತಿಹಾಸವೆಂದರೆ 'ಹೀಗೆ ಇತ್ತಂತೆ' ಎಂದು ಹೇಳುವ ಕಥೆ. ಶ್ರೀಮದ್ರಾಮಾಯಣವು ಇಂಥ ಹಿಂದಿನ ಕಥೆಯನ್ನು ಒಳಕೊಂಡದ್ದಾದರೂ, 'ಆದಿಕಾವ್ಯ'ವೆಂದು ಪ್ರಸಿದ್ಧವಾಗಿದೆ. ಮಹಾಭಾರತ ದಲ್ಲಿ ಪುರಾಣದಂಥ ಭಾಗಗಳು ಅನೇಕವಿದ್ದರೂ ಒಟ್ಟಿನ ಮೇಲೆ ಅದು 'ಇತಿಹಾಸ'ವೆಂದೇ ಪರಿಗಣಿತವಾಗಿದೆ. ಇತಿಹಾಸದಲ್ಲಿರುವುದು ಮುಖ್ಯವಾಗಿ ಮಹಾ ಪುರುಷರ ಕಥೆ; ಪುರಾಣಗಳಲ್ಲಿ ಹೇಳಿರುವುದು ದೇವದೇವತೆಯರ ಮಾಹಾತ್ಮ್ಯ.

ಪುರಾಣವು ಮೊದಲು ಒಂದೇ ಒಂದು ಇತ್ತೆಂದೂ ಅದರ ಆಧಾರದ ಮೇಲೆ ಹಲವು ಪುರಾಣಗಳು ಮತ್ತು ಉಪಪುರಾಣಗಳು ಆಮೇಲೆ ಹುಟ್ಟಿಕೊಂಡ ವೆಂದೂ ಹೇಳಲು ಆಧಾರವಿದೆ. ಇವುಗಳಲ್ಲಿ ಕೆಲವಾದರೂ ೧,೫೦೦ ವರ್ಷಗಳಿ ಗಿಂತ ಹಿಂದಿನವು. ಅವುಗಳಲ್ಲಿ ಬರುವ ಮೂಲಕಥೆಗಳು ಅದಕ್ಕೂ ಹಿಂದಿನವು.

ಈ ಪುರಾಣಗಳೆಲ್ಲವನ್ನೂ ವ್ಯಾಸರು ಬರೆದರೆಂದು ಹೇಳುವುದು ಸಂಪ್ರದಾಯ. ಆದರೆ ಇವಿಷ್ಟನ್ನೆಲ್ಲಾ ಒಬ್ಬರೇ ಬರೆಯುವುದು ಸಾಧ್ಯವೇ ?[1] ಈ ಪ್ರಶ್ನೆಯನ್ನು ಪುರಾಣವೇ ಎತ್ತಿ, ವ್ಯಾಸರು ಒಬ್ಬರಲ್ಲ, ಈಗಾಗಲೇ ೨೭ ಜನ ವ್ಯಾಸರು ಕಳೆದು ಹೋಗಿದ್ದಾರೆ; ಅವರೆಲ್ಲರೂ ಪುರಾಣ ಬರೆ ದಿದ್ದಾರೆ.—ಎಂದು ಸಮಾಧಾನ ಹೇಳಿದೆ.

ಪುರಾಣವು, ಮಹಾಪುರಾಣ ಉಪಪುರಾಣ ಎಂದು ಎರಡುವಿಧ. ಮಹಾ ಪುರಾಣಗಳು ಹದಿನೆಂಟು, ಉಪಪುರಾಣಗಳು ಹದಿನೆಂಟು ಎಂದು ಪ್ರಸಿದ್ಧಿ ಇದೆ. ಆದರೆ ಈ ಹದಿನೆಂಟರಲ್ಲಿ ಯಾವ ಯಾವುವು ಸೇರುತ್ತವೆ ಎಂಬ ವಿಚಾರದಲ್ಲಿ ಮತ ಭೇದ ವುಂಟು. ಮತ್ಸ್ಯಪುರಾಣದಲ್ಲಿ ಹೇಳಿರುವಂತೆ, ಬ್ರಹ್ಮ, ಪದ್ಮ, ವಿಷ್ಣು, ವಾಯು, ಭಾಗವತ, ನಾರದೀಯ, ಮಾರ್ಕಂಡೇಯ, ಆಗ್ನೇಯ, ಭವಿಷ್ಯ, ಬ್ರಹ್ಮವೈವರ್ತ, ಲಿಂಗ, ವರಾಹ, ಸ್ಕಂದ, ವಾಮನ, ಕೂರ್ಮ, ಮತ್ಸ್ಯ,

[1] ದೇವೀಭಾಗವತ ಒಂದರಲ್ಲಿಯೇ ೧೨ ಸ್ಕಂಧ (ಎಂದರೆ ಕಾಂಡ, ಪರ್ವ ಅಥವಾ ವಿಭಾಗ)ಗಳೂ ೩೧೮ ಅಧ್ಯಾಯಗಳೂ, ೧೮,೦೦೦ ಶ್ಲೋಕಗಳೂ ಇವೆ.

ಗರುಡ, ಬ್ರಹ್ಮಾಂಡ—ಇವು ಹದಿನೆಂಟೂ ಮಹಾಪುರಾಣಗಳು. ಸನತ್ಕುಮಾರ, ನರಸಿಂಹ, ನಾರದೀಯ, ಶಿವ, ದೂರ್ವಾಸ, ಕಪಿಲ, ಮಾನವ, ಔಶನಸ, ವರುಣ, ಕಾಳಿಕಾ, ಸಾಂಬ, ನಂದಿ, ಸೌರ, ಪರಾಶರ, ಆದಿತ್ಯ, ಮಹೇಶ್ವರ, ಭಾಗವತ, ವಾಸಿಷ್ಠ—ಇವು ಹದಿನೆಂಟೂ ಉಪಪುರಾಣಗಳು.[1]

ಇವುಗಳಲ್ಲಿ 'ಭಾಗವತ' ವೆಂದರೆ ಶ್ರೀಮದ್ ಭಾಗವತವೇ, ದೇವೀ ಭಾಗವತವೇ, ಯಾವುದು ಮಹಾಪುರಾಣ, ಯಾವುದು ಉಪಪುರಾಣ ಎಂಬುದು ಸ್ಪಷ್ಟವಾಗಿಲ್ಲ. ದೇವೀಭಕ್ತರು ದೇವೀಭಾಗವತವೇ ಮಹಾಪುರಾಣವೆಂದೂ ವಿಷ್ಣುಭಕ್ತರು ಶ್ರೀಮದ್‌ಭಾಗವತವೇ ಮಹಾಪುರಾಣವೆಂದೂ ಹೇಳುವುದು ಸಹಜ.

ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ, ವಂಶಾನುಚರಿತ—ಈ ಐದೂ ಪುರಾಣದ ಲಕ್ಷಣ. (ಮಹಾಪುರಾಣಕ್ಕೆ ಹತ್ತು ಲಕ್ಷಣಗಳೆಂದು ಹೇಳುವುದೂ ಉಂಟು.) ಎಂದರೆ, ಪುರಾಣದಲ್ಲಿ ಹೇಳುವುದು, ಮುಖ್ಯವಾಗಿ, ಈ ಪ್ರಪಂಚ ಹುಟ್ಟಿದ್ದು ಬೆಳೆದದ್ದು, ಇಲ್ಲಿ ಆಳಿದ ರಾಜರು, ಅವರ ವಂಶದ ಚರಿತ್ರೆ, ಇವುಗಳ ವಿವರ. ಹೀಗೆಂದ ಕೂಡಲೆ, ಅದರಲ್ಲಿ ವಿಜ್ಞಾನ, ಚರಿತ್ರೆ, ಭೂಗೋಳ ಇವೆಯೆಂದು ತಿಳಿಯಬಾರದು. ಇಂಥ ಈಗಿನ ಗ್ರಂಥಗಳ ದೃಷ್ಟಿಯಿಂದ ಪುರಾಣವನ್ನು ತೂಗಿ ಖಂಡನೆ ಮಾಡಲೂ ಬಾರದು. ಅದು ನ್ಯಾಯವಲ್ಲ. ಈಗ್ಗೆ ಸುಮಾರು ೧,೫೦೦ ಅಥವಾ ೨,೦೦೦ ವರ್ಷಗಳ ಕೆಳಗೆ ಈ ಪುರಾಣಕರ್ತರು ತಮಗೆ ಏನು ತಿಳಿದಿತ್ತೋ, ತಾವು ಯಾವುದು ನಿಜವೆಂದು ನಂಬಿಕೊಂಡಿದ್ದರೋ ಅವುಗಳನ್ನು ಬರೆದಿಟ್ಟಿದ್ದಾರೆ. ಸುಳ್ಳು ಹೇಳಿ ಯಾರನ್ನೂ ಮೋಸಗೊಳಿಸುವುದು ಅವರ ಉದ್ದೇಶವಾಗಿರಲಿಲ್ಲ.

ಕೆಲವು ಪುರಾಣಗಳಲ್ಲಿ ಈ ಐದು ಅಂಶಗಳು ಹೆಚ್ಚುಕಡಮೆಯಾಗಿರುತ್ತವೆ. ಮತ್ತೆ ಕೆಲವು ಪುರಾಣಗಳಲ್ಲಿ ಇವುಗಳ ಜೊತೆಗೆ ಹಲವು ಶಾಸ್ತ್ರ ವಿಚಾರಗಳು ಸೇರಿರುವುದೂ ಉಂಟು. ಯಾವುದು ಸೇರಲಿ ಬಿಡಲಿ, ಪುರಾಣದ ದೃಷ್ಟಿ ಧಾರ್ಮಿಕ, ಲೌಕಿಕವಲ್ಲ; ಉದ್ದೇಶ, ದೇವತಾ ಮಹಿಮೆಯ ಬೋಧನೆ.

---

[1] ದೇವೀಭಾಗವತ ಸ್ಕಂಧ ೧, ಅಧ್ಯಾಯ ೩ ನ್ನೂ ನೋಡಿ. ಇಲ್ಲಿಯೂ ಇದೇ ಪಟ್ಟಿಗಳು ಇವೆ.

ಒಟ್ಟಿನ ಮೇಲೆ 'ಪುರಾಣ'ವು ಧರ್ಮ, ದೈವಭಕ್ತಿ, ಸದಾಚಾರ, ನೀತಿ ಇವುಗಳನ್ನು ವಿವರಿಸುವ ಗ್ರಂಥ. ಆದರೆ ಇವೆಲ್ಲವೂ ಕಥೆ ಉಪಕಥೆ ಒಳಕಥೆಗಳ ಮಧ್ಯೆಯೋ ಅವುಗಳ ಮೂಲಕವೋ ಬರುತ್ತವೆ.

೨

ಇತಿಹಾಸ ಪುರಾಣಗಳನ್ನು ಸಂಸ್ಕೃತ ಮೂಲದಿಂದ ಕನ್ನಡಿಸಿ ಗದ್ಯ ರೂಪದಲ್ಲಿ ಪ್ರಕಟಿಸುವ ಕೆಲಸವು ಆರನೆಯ ಚಾಮರಾಜ ಒಡೆಯರವರ (೧೬೧೭-೧೬೩೭) ಕಾಲದಲ್ಲಿಯೇ ಆರಂಭವಾಯಿತು; ಚಿಕ್ಕದೇವರಾಜ ಒಡೆಯರವರು, ಮುಮ್ಮಡಿ ಕೃಷ್ಣರಾಜ ಒಡೆಯರವರು, ಚಾಮರಾಜ ಒಡೆಯರವರು ಇವರ ಕಾಲದಲ್ಲಿ ಮುಂದುವರೆಯಿತು. ಆದರೆ ರಾಮಾಯಣ ಭಾರತ ಭಾಗವತಗಳು ಸಮಗ್ರವಾಗಿ ಭಾಷಾಂತರವಾದರೂ, ಪುರಾಣಗಳೂ ಉಪಪುರಾಣಗಳೂ ಇನ್ನೂ ಪೂರ್ತಿಯಾಗಿ ಕನ್ನಡಕ್ಕೆ ಬಂದಿರಲಿಲ್ಲ. ಇವುಗಳನ್ನು ಸಂಸ್ಕೃತ ಮೂಲದೊಡನೆ ಆದಷ್ಟು ಸಮಗ್ರವಾಗಿಯೂ ಒಂದು ವ್ಯವಸ್ಥಿತವಾದ ರೀತಿಯಲ್ಲಿಯೂ ಕನ್ನಡಿಸಿ ಪ್ರಕಟಿಸುವ ಘನಕಾರ್ಯವು ಶ್ರೀ ಜಯಚಾಮರಾಜೇಂದ್ರ ಒಡೆಯರವರ ಅಪ್ಪಣೆಯ ಮೇರೆಗೆ ನಡೆಯುತ್ತಿದೆ. ಇದನ್ನು ಉಭಯ ಭಾಷಾಪಂಡಿತರಾದ ಆಸ್ಥಾನ ವಿದ್ವಾಂಸರು ಮಾಡುತ್ತಿದ್ದಾರೆ. ಈಗಾಗಲೇ ಹಲವು ಪುರಾಣಗಳೂ ಉಪಪುರಾಣಗಳೂ ಅಚ್ಚಾಗಿ ಬಂದಿವೆ. ಇನ್ನು ಕೆಲವು ಅಚ್ಚಾಗುತ್ತಿವೆ. ಶ್ರೀಮನ್ಮಹಾರಾಜರವರೇ ತಮ್ಮ ಚಿತ್ತಕ್ಕೆ ತೆಗೆದುಕೊಂಡು, ಶ್ರದ್ಧೆವಹಿಸಿ, ಔದಾರ್ಯ ತೋರಿಸಿ ಮುಂದೆ ಬರದೆ ಇದ್ದಿದ್ದರೆ ಇಷ್ಟು ದೊಡ್ಡ ಕೆಲಸವು, ಇಷ್ಟು ಚೆನ್ನಾಗಿಯೂ ಚುರುಕಾಗಿಯೂ ನಡೆಯುತ್ತಿರಲಿಲ್ಲ. ಇವುಗಳಿಂದ ತಮ್ಮ ಭಾಷಾಸಾಹಿತ್ಯ ಸಂಸ್ಕೃತಿಗಳಿಗೆ ಆಗಿರುವ ಮಹೋಪಕಾರಕ್ಕಾಗಿ ಕನ್ನಡಿಗರು ಶ್ರೀಮನ್ಮಹಾರಾಜರವರಿಗೆ ಎಷ್ಟು ಕೃತಜ್ಞರಾಗಿದ್ದರೂ ಸಾಲದು.

೩

ಪ್ರಕೃತಗ್ರಂಥವನ್ನು ಶೋಧಿಸಿ ಅನುವಾದಿಸಿರುವವರು ಸಂಸ್ಕೃತ ಕನ್ನಡ ಇಂಗ್ಲಿಷ್ ಭಾಷೆಗಳಲ್ಲಿಯೂ ಪ್ರಾಚ್ಯ ಮತ್ತು ಪಾಶ್ಚಾತ್ಯ ದರ್ಶನಗಳಲ್ಲಿಯೂ ಪ್ರಶಸ್ತಿ ಪಡೆದ ವಿದ್ವಾಂಸರು. ಅವರ ಅನುವಾದವು ಪದಕ್ಕೆ ಪದವಿಟ್ಟು

ಮಾಡಿದ ಭಾಷಾಂತರವಲ್ಲ. ಮೂಲದ ಅರ್ಥವು ಸ್ಪಷ್ಟವಾಗಬೇಕೆಂಬ ಉದ್ದೇಶದಿಂದ, ಅದನ್ನು ಹಿಗ್ಗಿಸಿ ವಿವರಿಸಿರುವುದೇ ಹೆಚ್ಚು. ಅಧ್ಯಾಯಗಳ ಮೊದಲಲ್ಲಿ ಕೊನೆಯಲ್ಲಿ, ಉಪಾಖ್ಯಾನದ ಕೊನೆಗೆ, ವಿಮರ್ಶೆಗಳಿರುತ್ತವೆ. ಇವು ವ್ಯಾಖ್ಯಾನ, ಇತರ ಪುರಾಣ, ದರ್ಶನಗಳು, ಧಾರ್ಮಿಕ ಗ್ರಂಥಗಳು ಇವುಗಳಿಂದ ತೆಗೆದುಕೊಂಡ ವಿಷಯಗಳನ್ನು ಒಳಕೊಂಡಿರುತ್ತವೆ. ಇದಲ್ಲದೆ, ಪ್ರತಿ ಸಂಪುಟದ ಮೊದಲಿನಲ್ಲಿಯೂ ಬರೆದಿರುವ ಮುನ್ನುಡಿಯೊಳಗೆ ಶ್ರೀಮಾನ್ ಶಾಸ್ತ್ರಿಗಳು ವೇದ ಶಾಸ್ತ್ರ ಪುರಾಣ ಸಾಹಿತ್ಯ ಇವುಗಳ ಸ್ವರೂಪ, ಸಂಬಂಧ, ಸ್ಥಾನ, ದೇವೀತತ್ವ ದೇವರು ಕರ್ಮ ಮುಂತಾದ ವಿಚಾರಗಳನ್ನು ಚರ್ಚಿಸಿದ್ದಾರೆ. ಒಂದು ಮಾತಿನಲ್ಲಿ ಹೇಳುವುದಾದರೆ, ಶ್ರೀಮಾನ್ ಶಾಸ್ತ್ರಿಗಳು ಮಾಡಿರುವ ಕೆಲಸವು ತುಂಬ ತೃಪ್ತಿಕರವಾಗಿಯೂ ಶ್ಲಾಘ್ಯವಾಗಿಯೂ ಇದೆ. ಮುದ್ರಣ ಚೆನ್ನಾಗಿದೆ. ಅಚ್ಚಿನ ತಪ್ಪುಗಳಿಲ್ಲ.

೪

ಮುಂದೆ, ಈ ಪುರಾಣದ ಹನ್ನೆರಡು ಸ್ಕಂಧಗಳಲ್ಲಿ ಅಡಗಿರುವ ವಿಷಯವನ್ನು ಸಂಗ್ರಹಿಸಿ ಕೊಟ್ಟಿದೆ :—

೧ **ನೆಯ ಸ್ಕಂಧ** :—ಪೀಠಿಕೆ—ಶುಕನ ವೃತ್ತಾಂತ—ಹಯಗ್ರೀವಾವತಾರ—ಮಧುಕೈಟಭಸಂಹಾರ—ಬುಧನ ಉತ್ಪತ್ತಿ—ಊರ್ವಶೀ ಪುರೂರವರ ಕಥೆ.

೨ **ನೆಯ ಸ್ಕಂಧ** :—ವ್ಯಾಸರ ತಾಯಿತಂದೆಗಳಿಂದ ಹಿಡಿದು ಜನಮೇಜಯರಾಯನ ಸರ್ಪಯಾಗದವರೆಗೆ ಭಾರತ ಕಥೆಯ ಸಂಗ್ರಹ—ರುರು ಪ್ರಮದ್ವತಿ, ಗರುಡನು ಅಮೃತವನ್ನು ತಂದದ್ದು ಮುಂತಾದ ಉಪಕಥೆಗಳು.

೩ **ನೆಯ ಸ್ಕಂಧ** :—ಸುದರ್ಶನನ ಮತ್ತು ಶ್ರೀರಾಮನ ಕಥೆಗಳು.

೪ **ನೆಯ ಸ್ಕಂಧ** :—ನರನಾರಾಯಣರ ವೃತ್ತಾಂತ—ಅವರಿಗೂ ಪ್ರಹ್ಲಾದನಿಗೂ ಯುದ್ಧ—ಭಾಗವತ ಕಥೆ.

೫ **ನೆಯ ಸ್ಕಂಧ** :—ಮಹಿಷ, ಚಂಡ, ಮುಂಡ, ಶುಂಭ, ನಿಶುಂಭ, ರಕ್ತಬೀಜ ಮುಂತಾದ ರಾಕ್ಷಸರ ಸಂಹಾರ—ಸುರಥರಾಜನು ತನ್ನ

ರಾಜ್ಯವನ್ನೂ ಸಮಾಧಿಯೆಂಬ ವೈಶ್ಯನು ಜೀವನ್ಮುಕ್ತಿಯನ್ನೂ ಪಡೆದ ವೃತ್ತಾಂತ.

**೬ ನೆಯ ಸ್ಕಂಧ** :—ವೃತ್ರಾಸುರನ ಕಥೆ—ನಹುಷನ ವೃತ್ತಾಂತ—ಕರ್ಮಗತಿ—ಯುಗಧರ್ಮ—ತೀರ್ಥಕ್ಷೇತ್ರಗಳು—ವಸಿಷ್ಠ ವಿಶ್ವಾಮಿತ್ರರ ಹೋರಾಟ—ಹರಿಶ್ಚಂದ್ರ ಶುನಶ್ಶೇಫರ ವೃತ್ತಾಂತ—ಹೈಹಯನ ವೃತ್ತಾಂತ—ನಾರದಪರ್ವತರ ಮತ್ತು ನಾರದಕಾಲಧ್ವಜರ ಕಥೆಗಳು.

**೭ ನೆಯ ಸ್ಕಂಧ** :—ಸೂರ್ಯ ಚಂದ್ರ ವಂಶಗಳ ರಾಜರ ಚರಿತ್ರೆ—ಸುಕನ್ಯಾ ಚವನ ದೇವೇಂದ್ರರ ಕಥೆ—ಸತ್ಯವ್ರತ ತ್ರಿಶಂಕುವಿನ ಕಥೆ—ಶುನಶ್ಶೇಫ ಹರಿಶ್ಚಂದ್ರರ ಕಥೆ—ದುರ್ಗಾ ಅಥವಾ ಶತಾಕ್ಷಿಯಿಂದ ದುರ್ಗಮ ರಾಕ್ಷಸನ ಸಂಹಾರ—ದೇವೀಗೀತಾ.

**೮ ನೆಯ ಸ್ಕಂಧ** :—ವರಾಹಾವತಾರ—ಸ್ವಾಯಂಭುವ ಮನುವಿನ ವಂಶದ ವರ್ಣನೆ—ಭೂಮಂಡಲದ ಸ್ವರೂಪ—ಗ್ರಹ ನಕ್ಷತ್ರಗಳು—ಅಧೋಲೋಕಗಳು—ನರಕಗಳು.

**೯ ನೆಯ ಸ್ಕಂಧ** :—ಮೂಲಪ್ರಕೃತಿಯ ದುರ್ಗಾ ಮುಂತಾದ ಐದು ದೇವೀರೂಪಗಳು—ಗಂಗಾ ತುಲಸೀ ಸಾವಿತ್ರೀ ಲಕ್ಷ್ಮೀ ಸ್ವಾಹಾ ಸ್ವಧಾ ದಕ್ಷಿಣಾ ಷಷ್ಠೀ ಮಂಗಲಚಂಡೀ ಮನಸಾ ಸುರಭೀ ಮುಂತಾದ ದೇವಿಯರ ಉಪಾಖ್ಯಾನಗಳು.

**೧೦ ನೆಯ ಸ್ಕಂಧ** :—ಮನುಗಳು—ವಿಂಧ್ಯ ಮತ್ತು ಅಗಸ್ತ್ಯರ ಉಪಾಖ್ಯಾನ—ಮಹಾಕಾಳೀ ಮಹಾಲಕ್ಷ್ಮೀ ಮಹಾಸರಸ್ವತೀ ಮುಂತಾದವರ ಅವತಾರಗಳು.

**೧೧ ನೆಯ ಸ್ಕಂಧ** :—ಆಚಾರವಿಧಿ—ಶ್ರುತಿ ಸ್ಮೃತಿ ಪುರಾಣಗಳ ಪ್ರಾಮಾಣ್ಯ—ಶೌಚ—ಸ್ನಾನ—ರುದ್ರಾಕ್ಷಿ—ವಿಭೂತಿ—ಪುಂಡ್ರಧಾರಣೆ—ಸಂಧ್ಯಾವಂದನೆ—ಬ್ರಹ್ಮಯಜ್ಞ—ಗಾಯತ್ರೀಪುರಶ್ಚರಣ ಶಾಂತಿಗಳು—ವೈಶ್ವದೇವ—ಕೃಚ್ಛ್ರ ಚಾಂದ್ರಾಯಣ ಮುಂತಾದ ವ್ರತಗಳು.

೧೨ ನೆಯ ಸ್ಕಂಧ :—ಗಾಯತ್ರೀ ಕವಚ, ಹೃದಯ, ಸ್ತೋತ್ರ, ಸಹಸ್ರನಾಮ, ದೀಕ್ಷೆಗಳು—ದೇವಿಯ ಆವಾಸವಾದ ಮಣಿದ್ವೀಪದ ವರ್ಣನೆ—ಫಲಶ್ರುತಿ.

೫

ಇವುಗಳನ್ನು ಪರಿಶೀಲಿಸಿದರೆ, ಈ ಪುರಾಣದಲ್ಲಿ ಉರ್ವಶೀ ಪುರೂರವರ ಪ್ರಣಯ ಕಥೆ, ವೃತ್ರಾಸುರನ ಸಂಹಾರ, ಶುನಶ್ಶೇಪನ ಬಿಡುಗಡೆ ಮುಂತಾದ ತುಂಬ ಹಳೆಯ ವೈದಿಕ ಕಥೆಗಳೂ, ವಸಿಷ್ಠ ವಿಶ್ವಾಮಿತ್ರ ತ್ರಿಶಂಕು ಮುಂತಾದವರ ಪುರಾಣ ಕಥೆಗಳೂ, ರಾಮಾಯಣ ಭಾರತ ಭಾಗವತ ಕಥೆಗಳೂ, ಸ್ನಾನ ಆಹ್ನಿಕ ಮುಂತಾದ ಸದಾಚಾರಕ್ಕೆ ಸಂಬಂಧಪಟ್ಟ ಧರ್ಮಶಾಸ್ತ್ರ ವಿಚಾರಗಳೂ ಇರುವುದು ಕಂಡುಬರುತ್ತದೆ. (ಶ್ರೀಮದ್ಭಾಗವತದ ಕೃಷ್ಣ ಕಥೆಯು ಆದ್ಯಂತವಾಗಿ ಈ ಪುರಾಣಕ್ಕೆ ಪರಿಚಿತವಾಗಿರುವುದು ಗಮನಿಸತಕ್ಕ ಅಂಶವಾಗಿದೆ.) ಇವೆಲ್ಲಕ್ಕೂ ಹಾಸುಹೊಕ್ಕಾಗಿ ನೆಯ್ದುಕೊಂಡಿರುವುದು ದೇವಿಯ ಮಹಿಮೆ : ಅವಳು ತನ್ನ ನಾನಾ ರೂಪಗಳಲ್ಲಿ, ಅವತಾರಗಳಲ್ಲಿ, ಮಾಡಿರುವ ದುಷ್ಟನಿಗ್ರಹ ಶಿಷ್ಟಪರಿಪಾಲನೆ. ಈ ಪುರಾಣದಲ್ಲಿ ಉಕ್ತರಾದ ಸೂರ್ಯ ಚಂದ್ರ ವಂಶಗಳ ರಾಜಾಧಿರಾಜರೆಲ್ಲಾ ದೇವಿಯ ಭಕ್ತರು. ಅವರಿಗೆ ಇಷ್ಟಪ್ರಾಪ್ತಿ ಅನಿಷ್ಟನಿವೃತ್ತಿ ಆದದ್ದು ಅವಳಿಂದ; ಇಂದ್ರ ಚಂದ್ರಾದಿ ದೇವತೆಗಳೂ ಬ್ರಹ್ಮ ವಿಷ್ಣು ಮಹೇಶ್ವರರೂ ಶಕ್ತಿವಂತರಾಗಿರುವುದು ದೇವಿಯಿಂದಲೇ ; ಸರಸ್ವತೀ ಲಕ್ಷ್ಮೀ ಪಾರ್ವತಿಯರು ದೇವಿಯ ಅಂಶಾವತಾರ ಮೂರ್ತಿಗಳು. ಅವಳ ಭಕ್ತರು ಆರ್ತರಾಗಿ ಮಾಡಿರುವ ಸ್ತೋತ್ರಗಳು ಪುರಾಣದ ಉದ್ದಕ್ಕೂ ಅಲ್ಲಲ್ಲೇ ಬರುತ್ತವೆ. ದೇವಿಯ ಪೂಜಾವಿಧಿ ಉಪಾಸನಾ ಕ್ರಮಗಳೂ ಹಾಗೆಯೇ ಹಲವು ಕಡೆ ಕೊಡಲ್ಪಟ್ಟಿವೆ.

೬

ಆಧುನಿಕ ಕಾಲದಲ್ಲಿ ಕನ್ನಡ ಸಾಹಿತ್ಯವು ಬಹುಮುಖವಾಗಿ ಬೆಳೆದಿದೆ. ಅಲ್ಲದೆ, ನಾವು ಇಂದು ನಾನಾ ದೇಶಗಳ ಸಾಹಿತ್ಯಗಳನ್ನು ಮೂಲದಲ್ಲಿಯೋ ಭಾಷಾಂತರದಲ್ಲಿಯೋ ಓದಿದ್ದೇವೆ. ಆದ್ದರಿಂದ ನಮಗೆ ಪುರಾಣದ ಎಲ್ಲಾ ಉಪಾಖ್ಯಾನಗಳೂ ರುಚಿಸದಿರಬಹುದು. ಆದರೆ ಅವುಗಳನ್ನು ಸಣ್ಣ ಕಥೆಗಳಾಗಿ,

ಕಾದಂಬರಿಗಳಾಗಿ ಕಂಡು ಖಂಡಿಸಬಾರದು. ಹಳೆಯ ಮರವನ್ನು ಹೊಸ ಪಯಿರಿಗೆ ಹೋಲಿಸಬಹುದೇ? ಅವುಗಳಲ್ಲಿ ಬರುವ ಕಥೆ ಧರ್ಮವನ್ನು ಬೋಧಿಸುವುದಕ್ಕೆ ಹಿನ್ನೆಲೆ ಮಾತ್ರ. ಧರ್ಮವೂ ಇಂದು ಮಡಿಯಾಗಿ ಮುದುರಿಕೊಂಡು ಕುಳಿತಿಲ್ಲ. ನಾವು ನಮ್ಮ ನಮ್ಮ ಪಂಗಡಕ್ಕೆ ಬಂದ ಮತಗ್ರಂಥಗಳನ್ನೇ ಅಲ್ಲದೆ, ಇತರ ಆಸ್ತಿಕ ನಾಸ್ತಿಕ ಭಾರತೀಯ ವಿದೇಶೀಯ ಮತಗ್ರಂಥಗಳನ್ನೆಲ್ಲಾ ಓದುತ್ತೇವೆ. ಆದ್ದರಿಂದ ಸರ್ವಮಾನವ ಸಾಧಾರಣವಾದ ಒಂದು ವಿಶ್ವಧರ್ಮದ ಕಡೆಗೆ ನಮ್ಮ ದೃಷ್ಟಿ ಹೋಗುವುದು ಸಹಜ. ಈ ದೃಷ್ಟಿಯಿಂದ ಪುರಾಣಗಳನ್ನು ಓದಿ ಅಸಾರವಾದ ಸಿಪ್ಪೆಯನ್ನು ಬಿಟ್ಟು ಸಾರವಾದ ತಿರುಳನ್ನು ಸಂಗ್ರಹಿಸುವುದು ವಿವೇಕ.

ಪುರಾಣಗಳಲ್ಲಿ ಸಾರವಾದ ಭಾಗದ ಜೊತೆಗೆ ಅಸಾರವಾದ ಭಾಗವೂ ಬೇಕಾದಷ್ಟಿದೆ; ಅಶ್ಲೀಲವೆಂದು ಹೇಳಬಹುದಾದ ಭಾಗಗಳಿವೆ; ದೇವಾಧಿದೇವತೆಗಳ ನಡತೆಯನ್ನು ಲಘುವಾಗಿ, ಆಕ್ಷೇಪಕರವಾಗಿ, ಮಾಡುವಂಥ ಉಪಾಖ್ಯಾನಗಳಿವೆ. ಇಂಥ ಆಕ್ಷೇಪಗಳನ್ನು ಎತ್ತಿ ಸಮಾಧಾನ ಹೇಳಿರುವುದು ದೇವೀಭಾಗವತದ ಒಂದು ವಿಶೇಷಲಕ್ಷಣ. ತನ್ನ ನಾಲ್ಕನೆಯ ಸ್ಕಂಧದಲ್ಲಿ ಅದು ಎತ್ತಿರುವ ಸಂದೇಹಗಳನ್ನು ಈ ಕೆಳಗೆ ಕೊಟ್ಟಿದೆ:—

"ಕರ್ಮತತ್ಪರನಾದ ವಸುದೇವನಿಗೆ ಕಾರಾಗೃಹಪ್ರಾಪ್ತಿ ಏಕಾಯಿತು? ಯಯಾತಿಕುಲದಲ್ಲಿ ಹುಟ್ಟಿದವನಾದರೂ ಕಂಸನು ಅಷ್ಟು ಕ್ರೂರಕೃತ್ಯವನ್ನೇಕೆ ಮಾಡಿದನು? ವಿಷ್ಣುವು ಸೆರೆಮನೆಯಲ್ಲಿ ಹೇಗೆ ಹುಟ್ಟಿದ? ಗೋಪಾಲ ಜೀವನವನ್ನು ಏಕೆ ಜೀವಿಸಿದ? ಮುದುಕರಾದ ತಾಯಿತಂದೆಗಳನ್ನು ಏಕೆ ಸೆರೆಯಿಂದ ಬಿಡಿಸಲಿಲ್ಲ? ದೇವರು ಹೊಟ್ಟೆಯಲ್ಲಿದ್ದರೂ ಅವರು ಏಕೆ ಕಷ್ಟವನ್ನನುಭವಿಸಿದರು? ಅವರು ಮಾಡಿದ್ದ ಅಂಥ ಪ್ರಾಚೀನ ಕರ್ಮವೇನು? ಕೊಲ್ಲಲ್ಪಟ್ಟ ಆ ಮಕ್ಕಳು ಯಾರು? ದುರ್ಗಿ ಯಾರು? ಕೃಷ್ಣನು ಅಷ್ಟೊಂದು ಹೆಂಡಿರೊಡನೆ ಹೇಗೆ ಸಂಸಾರನಡಸಿದನು? ನರನಾರಾಯಣರು ತಮ್ಮ ದೇಹವಿದ್ದೂ ಕೃಷ್ಣಾರ್ಜುನರಾದದ್ದು ಹೇಗೆ? ಮತ್ತು ಏಕೆ? ಕೋಟೆಯ ಮಧ್ಯೆ ಇದ್ದ ಅರಮನೆಯಿಂದ ಪ್ರದ್ಯುಮ್ನನು ಅಪಹೃತನಾದದ್ದು ಹೇಗೆ? ದಿವ್ಯಚಕ್ಷುಸ್ಸುಳ್ಳ ವಾಸುದೇವನಿಗೆ ಇದು ಮೊದಲೇ ಏಕೆ ಗೊತ್ತಾಗಲಿಲ್ಲ? ಅವನ ಹೆಂಡತಿಯ

ರೆಲ್ಲರನ್ನೂ ಹೇಗೆ ಕಳ್ಳರು ಹೊತ್ತುಕೊಂಡು ಹೋದರು? ಅವನು ರಾಕ್ಷಸರಿಗೆ ಹೆದರಿಕೊಂಡು ಮಥುರೆಯನ್ನು ಬಿಟ್ಟು ದ್ವಾರಕಿಗೆ ಏಕೆ ಬಂದ?

ಅಂಥ ಧರ್ಮಿಷ್ಠರೂ ವಿಷ್ಣುಭಕ್ತರೂ ಆದ ಪಾಂಡವರಿಗೆ ಏಕೆ ಕಷ್ಟಪ್ರಾಪ್ತಿಯಾಯಿತು? ಛಲದಿಂದಲೂ ಲೋಭದಿಂದಲೂ ಅವರು ಭೀಷ್ಮ ದ್ರೋಣಾದಿ ಹಿರಿಯರನ್ನು ಏಕೆ ಕೊಂದರು? ಇಂಥ ಪಾಪಕಾರ್ಯಕ್ಕೆ ಅವರನ್ನು ವಾಸುದೇವನು ಹೇಗೆ ಪ್ರೇರಿಸಿದನು?

ಇಂದ್ರನು ತಾಯಿಯ ಗರ್ಭವನ್ನು ಹೊಕ್ಕು ಅದನ್ನು ತುಂಡು ತುಂಡಾಗಿ ಕತ್ತರಿಸಿದನು. ವಿಷ್ಣುವು ವಾಮನನಾಗಿ ಬಲಿಯನ್ನು ಮೋಸಪಡಿಸಿದನು.—ಇವೆಲ್ಲಾ ಸರಿಯೇ?"

ಈ ಪ್ರಶ್ನೆಗಳಿಗೆ ಪುರಾಣವು ಕೊಟ್ಟಿರುವ ಉತ್ತರಗಳು ನಮಗೆ ಒಪ್ಪಿಗೆಯಾಗದಿರಬಹುದು. ಹೀಗೆಂದು ಈ ಕಥೆಗಳೆಲ್ಲಾ ಸುಳ್ಳು, ಇವುಗಳಿಂದೇನು, ಎನ್ನೋಣವೇ? ಸುಳ್ಳೆಂದು ಕೈಬಿಟ್ಟರೆ ಪುರಾಣಗಳೇ ಇರುವುದಿಲ್ಲ. ಪುರಾಣದ ಮಾತು ಹಾಗಿರಲಿ, ನಿಜವೆನ್ನಿಸಿಕೊಂಡ ಹಿಂದಿನ ಮತ್ತು ಇಂದಿನ ಚರಿತ್ರೆಯಲ್ಲಿ ನಮಗೆ ಪರಿಚಿತವಾದ ಅನೇಕ ಘಟನೆಗಳಿಗೆ, ದುರ್ಘಟನೆಗಳಿಗೆ, ನಾವು ಧಾರ್ಮಿಕವಾಗಿ, ಸಮಂಜಸವಾದ ಸಮಾಧಾನಗಳನ್ನು ಕೊಡಬಲ್ಲೆವೇ?

೭

ಈ ಉಪಾಖ್ಯಾನಗಳ ಸ್ವರೂಪ ಹೇಗಾದರೂ ಇರಲಿ, ಇವುಗಳ ಮೂಲಕ ಪುರಾಣವು ಎತ್ತಿ ಹಿಡಿದಿರುವುದು ಸತ್ಯ, ಧರ್ಮ, ನ್ಯಾಯ ಇವುಗಳನ್ನು. ಪರಲೋಕವಿಲ್ಲವೆನ್ನುವವರೂ ಕೂಡ, ಇಹದಲ್ಲಿ ಸುಖ ಶಾಂತಿಗಳು ನೆಲಸಬೇಕಾದರೆ ಈ ಗುಣಗಳಿಂದಲೇ ಎಂದು ಒಪ್ಪುತ್ತಾರೆ. ಪುರಾಣಗಳು ಪ್ರತಿಪಾದಿಸುವ ಮತ್ತೊಂದು ಮೂಲಭೂತವಾದ ಸಂಗತಿ,—ಯಾರಿಗೂ ಎಂದಿಗೂ ಬಿಡಿಸಲಾಗದಿರುವ ಸಮಸ್ಯೆ—ವಿಧಿ ಪೌರುಷವಾದ. ಅದರ ವಿಚಾರವಾಗಿ ಇಲ್ಲಿ ಎರಡು ಮಾತು ಹೇಳಬಹುದು.

"ಮನುಷ್ಯನು ಸರ್ವಶಕ್ತ, ಅವನಿಗೆ ಮೀರಿದ್ದು ಯಾವುದೂ ಇಲ್ಲ; ಅವನಿಂದ ಯಾವುದಾದರೂ ಆಗದಿದ್ದರೆ ಅದಕ್ಕೆ ಪುರುಷಪ್ರಯತ್ನ ಸಾಲದು ಎಂದು ಅರ್ಥ; ದೈವವೆಂಬುದೇ ಇಲ್ಲ" ಎಂಬುದು ಒಂದು ಮತ. "ದೈವಕ್ಕೆ

ಎದುರಿಲ್ಲ; ದೈವಸಂಕಲ್ಪವಿಲ್ಲದೇ ಒಂದೂ ನೆರವೇರುವುದಿಲ್ಲ; ಮನುಷ್ಯನು ಅದಕ್ಕೆ ಅಧೀನ; ಚಾಲಕನ ಕೈಯ ಸಲಕರಣೆ" ಎಂಬುದು ಇನ್ನೊಂದು ಮತ. ಈ ಎರಡು ಮತಗಳನ್ನೂ ದೇವೀಭಾಗವತವು ಅಲ್ಲಲ್ಲಿ ಪ್ರಸ್ತಾಪಿಸಿರುತ್ತದೆ. ಉದಾಹರಣೆಗಾಗಿ,

> ಚಕ್ರೀಸಮೀಪೇ ಸಂವಿಷ್ಟಾ ಸಂಸ್ಥಿತಾ ಪಿಷ್ಟಕಾರಿಣೀ |
> ಉದ್ಯಮೇನ ವಿನಾ ಪಿಷ್ಟಂ ನ ಭವತ್ಯೇವ ಸರ್ವಥಾ ||
> ಉದ್ಯಮೇ ಚ ಕೃತೇ ಕಾರ್ಯಂ ಸಿದ್ಧಿಂ ಯಾತ್ಯೇವ ಸರ್ವಥಾ |
> ಕದಾಚಿತ್ತಸ್ಯ ನ್ಯೂನತ್ವೇ ಕಾರ್ಯಂ ನೈವ ಭವೇದಪಿ ||
>
> (V-೨೭-೪೦, ೪೧).

ಅರ್ಥ :—ಹಿಟ್ಟು ಬೀಸುವವಳು ಬೀಸುವ ಕಲ್ಲಿನ ಹತ್ತಿರ ಕುಳಿತುಕೊಂಡಿದ್ದ ಮಾತ್ರಕ್ಕೇ, ಪ್ರಯತ್ನವಿಲ್ಲದೇ, ಸ್ವಲ್ಪವೂ ಹಿಟ್ಟು ಆಗುವುದಿಲ್ಲ. ಪ್ರಯತ್ನಮಾಡಿದರೆ ಕಾರ್ಯಸಿದ್ಧಿಯಾಗಿಯೇ ಆಗುತ್ತದೆ. ಆ ಪ್ರಯತ್ನ ಕಡಮೆಯಾದರೆ, ಯಾವಾಗಲಾದರೂ, ಕಾರ್ಯ ಆಗದಿರುವುದೂ ಉಂಟು.

> ಕಾಲೋ ನಿಮಿತ್ತಮಾತ್ರಂ ತು ದೈವಂ ಹಿ ಬಲವತ್ತರಂ |
> ದೈವೇನ ನಿರ್ಮಿತಂ ಸರ್ವಂ ನಾನ್ಯಥಾ ಭವತೀತ್ಯದಃ ||
> ದೈವಮೇವ ಪರಂ ಮನ್ಯೇ ಧಿಕ್ ಪೌರುಷಮನರ್ಥಕಂ ||
>
> (V-೭೧-೭, ೮)

ಅರ್ಥ :—ದೈವವೇ ಬಲವತ್ತರವಾದದ್ದು; ಎಲ್ಲವೂ ದೈವದಿಂದ ನಿರ್ಮಿತವಾದದ್ದು, ಯಾವುದೂ ಅದಕ್ಕಿಂತ ಬೇರೆ ರೀತಿಯಾಗುವುದಿಲ್ಲ. ದೈವವೇ ಹೆಚ್ಚೆಂದು ನಾನು ತಿಳಿಯುತ್ತೇನೆ. ಪೌರುಷಕ್ಕೆ ಧಿಕ್ಕಾರವಿರಲಿ.

ಈ ಮತಗಳ ಸತ್ಯಾಸತ್ಯತೆಗಳನ್ನೂ ಇತಿಮಿತಿಗಳನ್ನೂ ಹೀಗೇ ಎಂದು ನಿರ್ಧರಿಸುವುದು ಅಸಾಧ್ಯ. ಗ್ರಂಥಪ್ರಮಾಣಗಳನ್ನು ಎರಡು ಕಡೆಗೂ ಕೊಡಬಹುದು; ಸೂತ್ರಗಳನ್ನೂ ಶ್ಲೋಕಗಳನ್ನೂ ಒಡ್ಡಿದ ಮಾತ್ರದಿಂದಲೇ ಸತ್ಯವನ್ನು ಸ್ಥಾಪಿಸಿದಂತಾಗುವುದಿಲ್ಲ. ಹೀಗಿರಲು, ಮಿಕ್ಕ ಹಲವೆಡೆಗಳಲ್ಲಿರುವಂತೆ ಇಲ್ಲಿಯೂ ಸತ್ಯವು ಈ ಎರಡು ಅತಿಗಳ ನಡುವೆ ಇದ್ದೀತೇ? ಹೀಗೆ, 'ದೈವ ಪುರುಷಕಾರಗಳು ಗಾಡಿಯ ಎರಡು ಚಕ್ರಗಳಂತೆ; ಬಾಳಿನ ಗಾಡಿಯು

ಹೋಗುವುದಕ್ಕೆ ಈ ಎರಡು ಚಕ್ರಗಳೂ ಚಲಿಸಬೇಕು; ಯಾವ ಒಂದು ಚಕ್ರವಿಲ್ಲದಿದ್ದರೂ ಗಾಡಿ ಬಿದ್ದು ಹೋಗುವುದು" ಎಂದು ಹೇಳುವ ಮಧ್ಯಸ್ಥಿಕೆಯ ಒಂದು ಮತವೂ ಇದೆ. ಆದರೆ ಈ ಎರಡು ಚಕ್ರಗಳಿಗೆ ಇರುವ ಸಂಬಂಧವೆಂತಹುದು? ಬೈಸಿಕಲ್ ಗಾಡಿಯಲ್ಲಿ ಇರುವಂತೆ ಹಿಂದಿನ ಚಕ್ರ ತಿರುಗುವುದರಿಂದ ಮುಂದಿನದೂ ತಿರುಗುತ್ತದೆಯೇ? ಎಂದರೆ,

> ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ |
> ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ||
>
> (ಗೀತಾ, ೧೮-೬೧)

ಎಂಬುದು ನಿಜವೇ? ಇಲ್ಲ, 'ದೈವವೆಂಬುದು ಬೇರೆ ಇಲ್ಲ; ಪುರುಷ ಪ್ರಯತ್ನವೇ ದೈವಾಕಾರವನ್ನು ತಾಳುತ್ತದೆ; ಪೂರ್ವಜನ್ಮಕೃತಂ ಕರ್ಮ ತದ್ದೈವಮಿತಿ ಕಥ್ಯತೇ' ಎಂಬುದು ನಿಜವೇ? ಎಂಬ ಪ್ರಶ್ನೆ ಏಳುತ್ತದೆ. ಇವುಗಳ ಜೊತೆಗೆ,

> ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಂ |
> ವಿವಿಧಾಶ್ಚ ಪೃಥಕ್ ಚೇಷ್ಟಾ ದೈವಂ ಚೈವಾತ್ರ ಪಂಚಮಂ ||
>
> (ಗೀತಾ, ೧೮-೧೪)

ಎಂಬ, ದೈವವನ್ನು ಐದನೆಯ ಚಕ್ರವಾಗಿ ಮಾಡುವ, ಮತವೂ ಇದೆ. ಹೀಗಿರಲು, ಈ ಸಂದರ್ಭದಲ್ಲಿ—ಬ್ರಹ್ಮವಾಗಲಿ, ಭಗವತಿಯಾಗಲಿ—ಮನುಷ್ಯ ಶಕ್ತಿಗೆ ಮೀರಿದ ಮತ್ತೊಂದು ಶಕ್ತಿಯಿದೆ ಎಂದು ಒಪ್ಪಿಕೊಂಡು ಕೆಲಸ ಮಾಡುವುದು ಸೂಕ್ತವಾಗಿ ಕಾಣುತ್ತದೆ[1]. ಏಕೆಂದರೆ, ಪ್ರಪಂಚದಲ್ಲಿ ಮನುಷ್ಯನು ಹುಟ್ಟಿದ್ದು

---

[1] ಇದೇ ಅಭಿಪ್ರಾಯವೇ ಮುಂದಿನ ಶ್ಲೋಕದಲ್ಲಿ ಅಡಗಿರುವಂತಿದೆ:—

> ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಂ |
> ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ||
>
> (ಗೀತಾ, ೧೮-೪೬).

ಅರ್ಥ—ಯಾರಿಂದ ಪ್ರಾಣಿಗಳಿಗೆ ಕಾರ್ಯದಲ್ಲಿ ಪ್ರವೃತ್ತಿಯುಂಟಾಗುತ್ತದೆಯೋ, ಯಾರಿಂದ ಈ (ಜಗತ್ತು) ಎಲ್ಲವೂ ವ್ಯಾಪ್ತವಾಗಿದೆಯೋ, ಅವನನ್ನು ತನ್ನ ಕರ್ಮದಿಂದ ಅರ್ಚಿಸಿ ಮಾನವನು ಸಿದ್ಧಿ ಹೊಂದುತ್ತಾನೆ.

ಮೊನ್ನೆ ಮೊನ್ನೆ; ಎಂದರೆ ಜಗತ್ತು ಸೃಷ್ಟಿಯಾದ ಕೋಟ್ಯಂತರವರ್ಷಗಳ ಮೇಲೆ: ಅವನು ಹುಟ್ಟಿ ಇಷ್ಟು ಅಪರ ಬುದ್ಧಿವಂತನಾಗಿ 'ನಾನು ಸರ್ವಶಕ್ತ!' ಎಂದು ಕೊಚ್ಚಿಕೊಳ್ಳುವ ಹಾಗಾಗುವುದಕ್ಕಿಂತ ಮುಂಚೆ ಕೋಟ್ಯಂತರ ವರ್ಷಗಳಿಂದ ಪ್ರಪಂಚವು ತನಗೆ ಹೇಗೆ ಬೇಕೋ ಹಾಗೆ ಪರಿಣಾಮ ಗೊಂಡು ರೂಪುತಾಳುತ್ತಿತ್ತು. ನಿರ್ಜೀವವಾಗಿದ್ದ ಜಗತ್ತಿನಲ್ಲಿ ಜೀವ ಹುಟ್ಟಿ, ಅಣುಜೀವಿಗಳಿಂದ ಹಿಡಿದು ಪೆಡಂಭೂತಗಳವರೆಗೆ, ಅಜ್ಞನಿಂದ ವಿಜ್ಞನವರೆಗೆ, ನಾನಾ ವಿಧವಾದ ಅಚೇತನ ಅಲ್ಪಚೇತನ ಸುಚೇತನ ವಸ್ತುಗಳು ಹುಟ್ಟಿ ಬೆಳೆದು ನಾಶಹೊಂದಿ, ಸೃಷ್ಟಿವಿಕಾಸವು ಮುಂದುವರಿದು ಇಂದಿನ ರೂಪವನ್ನು ತಾಳಿತು. ಆವಾಗಲೆಲ್ಲಾ ಅನೇಕ ಕೋಟಿ ಬ್ರಹ್ಮಾಂಡಗಳ ಮೇಲೆ ದವಲತ್ತು ಮಾಡಲು ಈ ಚೋಟುದ್ದದ ಮನುಷ್ಯಪ್ರಾಣಿಯೇ ಇತ್ತೇ? ಅಂದಿನಿಂದ ಪರಮಾಧಿಕಾರ ನಡಸುತ್ತಿದ್ದ ಶಕ್ತಿಯು ಆ ಅಧಿಕಾರವನ್ನು ತನ್ನ ಮಗು ಸರ್ವ ಸಮರ್ಥನಾದನೆಂದು ಅವನಿಗೆ ಪೂರ್ತಿಯಾಗಿ ವಹಿಸಿಕೊಟ್ಟು ಕೈ ತೊಳೆದುಕೊಂಡು ಬಿಟ್ಟಿತೋ? ಹೀಗೆ ಹೇಳುವುದಕ್ಕೆ ಆಧಾರವೇನೂ ಇಲ್ಲ. ವಿಶ್ವದಲ್ಲಿ ಭೂಮಿ ಒಂದು ಕಣ; ಆ ಭೂಮಿಯಲ್ಲಿ ಮನುಷ್ಯನು ಒಂದು ಅಣು; ಇಂಥವನ ಅಧಿಕಾರ ಅಂಗೈ ಅಗಲದ ಭೂಮಿಯೊಂದರ ಮೇಲೆ; ಅದೂ ಸ್ವಲ್ಪ ಮಾತ್ರ. ಅವನೇನು "ವಿಶ್ವಸ್ಯ ಕರ್ತಾ ಭುವನಸ್ಯ ಗೋಪ್ತಾ" ಅಲ್ಲ. ಆ ಅಗಾಧ ಕಾರ್ಯವನ್ನು ಇಂದಿಗೂ ಬೇರೊಂದು ಮಹಾಶಕ್ತಿ ನಡಸುತ್ತಿದೆ.

ಆ ಶಕ್ತಿ ಯಾವುದು? ಅದರ ಅರಿವು ಅನುಭವಗಳೇ ಜ್ಞಾನ ವಿಜ್ಞಾನಗಳ, ಮತ್ತು ಧರ್ಮದರ್ಶನಗಳ, ಅಂತಿಮಗುರಿಯಾಗಿ ಕಾಣುತ್ತದೆ.

೮

ಪುರಾಣಗಳ ಭಾಷೆ, ತಕ್ಕಮಟ್ಟಿಗೆ ಸರಳವಾಗಿಯೇ ಇರುತ್ತದೆ. ಆದರೂ, ಸಂಸ್ಕೃತವನ್ನು ತಿಳಿದ ಜನ ಸ್ವಲ್ಪವಾಗಿದ್ದು, ಆಸ್ತಿಕರೂ ಶ್ರದ್ಧಾಳುಗಳೂ ಆದ ಕನ್ನಡಿಗರು ಅರ್ಥವಿವರಣೆಗೆ ಅವರ ಸಹಾಯವನ್ನು ಕೋರಬೇಕಾಗಿತ್ತು. ಈಗ, ಯಾರ ಸಹಾಯವೂ ಬೇಕಿಲ್ಲದೆ, ಅವಕಾಶವಾದಾಗ ತಾವೇ ಓದಿ

ಕೊಳ್ಳಲು ಸಾಧ್ಯವಾಗುವಂತೆ ಈ ಅನುವಾದ ಭಾಷಾಂತರಗಳನ್ನು ಮಾಡಿಸಿ ಜೊತೆಗೆ ಮೂಲವನ್ನು ಕನ್ನಡ ಲಿಪಿಯಲ್ಲಿ ಅಚ್ಚುಹಾಕಿಸಿ ಕೊಟ್ಟಿರುವುದಕ್ಕಾಗಿ, ಕನ್ನಡಿಗರು ಶ್ರೀಮನ್ಮಹಾರಾಜರವರಿಗೆ ಅತ್ಯಂತ ಕೃತಜ್ಞರಾಗಿದ್ದಾರೆ. ಸಂಸ್ಕೃತದಲ್ಲಿ ಸಾರವಾದದ್ದೆಲ್ಲಾ ಹೀಗೆ ಕನ್ನಡದಲ್ಲಿ ಒದಗಿದರೆ ಸಂಸ್ಕೃತ ಬದುಕುತ್ತದೆ, ಕನ್ನಡ ಬೆಳೆಯುತ್ತದೆ.[1]

---

[1] ಪುಸ್ತಕ ಪ್ರಪಂಚ—ನವೆಂಬರ್ ೧೯೪೭.

# ಮಹಾಭಾರತ, ಮತ್ತು ಭಾರತೀಯ ಸಂಸ್ಕೃತಿಯಲ್ಲಿ ಅದರ ಸ್ಥಾನ

ಭರತಖಂಡದ ಸಂಸ್ಕೃತಿಗೆ ಶ್ರುತಿ ಸ್ಮೃತಿ ಇತಿಹಾಸ ಪುರಾಣ ಇವೇ ಮುಖ್ಯವಾದ ಆಧಾರಗಳು. ಶ್ರುತಿಯೆಂದರೆ ವೇದ; ಅದರ ಒಂದು ಭಾಗವಾದ ಉಪನಿಷತ್ತೇ ಮುಂದಿನ ವೇದಾಂತ ಮೊದಲಾದ ದರ್ಶನಗಳಿಗೆಲ್ಲಾ ಮೂಲ. ಸ್ಮೃತಿಯೆಂದರೆ ಧರ್ಮಶಾಸ್ತ್ರ; ಇತಿಹಾಸವೆಂದರೆ ರಾಮಾಯಣ ಮಹಾ ಭಾರತಗಳು; ಪುರಾಣಗಳು, ಮತ್ಸ್ಯಪುರಾಣ ಕೂರ್ಮಪುರಾಣ ಬ್ರಹ್ಮಾಂಡ ಪುರಾಣ ಮೊದಲಾಗಿ ಹಲವು ಇವೆ; ಅವುಗಳಲ್ಲಿ ಬ್ರಹ್ಮ ವಿಷ್ಣು ಶಿವ ಮುಂತಾದ ದೇವತೆಗಳ ಮಾಹಾತ್ಮ್ಯ ಬರುತ್ತದೆ. ಇತಿಹಾಸದಲ್ಲಿ ರಾಮ ಕೃಷ್ಣರು ಭೀಮಾರ್ಜುನರು ಮುಂತಾದ ವೀರರ ಸಾಹಸಕಾರ್ಯಗಳೇ ಪ್ರಧಾನವಾಗಿರುತ್ತವೆ. ಜೊತೆಯಲ್ಲಿ ವೈದಿಕ ಪೌರಾಣಿಕ ಕಥೆಗಳೂ ಮಧ್ಯೆ ಮಧ್ಯೆ ಧರ್ಮಬೋಧನೆ ನೀತಿವಿಚಾರಗಳೂ ಬರುತ್ತವೆ.

ಭಾರತವು ಬಹು ಪ್ರಾಚೀನವಾದ ಗ್ರಂಥ. ಅದು ಹುಟ್ಟಿ ಇಂದಿಗೆ ಎರಡು ಸಾವಿರ ವರ್ಷಗಳ ಮೇಲಾಗಿರಬೇಕು. ಅಲ್ಲಿಂದ ಈಚೆಗೆ, ಮೂಲನದಿಗೆ ಉಪ ನದಿಗಳು ಸೇರುವಂತೆ, ಅದಕ್ಕೆ ಹಲವು ಭಾಗಗಳು ಸೇರಿ ಬೆಳೆದು ಅದು ಮಹಾಭಾರತವಾಗಿದೆ; ಮಹಾಭಾರತವೆಂದರೆ ದೊಡ್ಡ ಭಾರತ; ಅದರಷ್ಟು ದೊಡ್ಡ ಗ್ರಂಥ ಪ್ರಪಂಚದ ಮತ್ತಾವ ದೇಶದಲ್ಲೂ, ಮತ್ತಾವ ಕಾಲದಲ್ಲೂ, ಕಂಡು ಬರುವುದಿಲ್ಲ. ಅದು ಆಕಾರದಲ್ಲಿ ಮಾತ್ರ ದೊಡ್ಡದಲ್ಲ; ವಿಷಯ ದಲ್ಲಿಯೂ ದೊಡ್ಡದು; ಅದು ವೇದದಷ್ಟೇ ಪೂಜ್ಯವಾದದ್ದು; ಅದನ್ನು ಐದನೆಯ ವೇದವೆಂದೇ ಕರೆಯುತ್ತಾರೆ. ವೇದದಲ್ಲಿ ಹೇಳಿರುವ ಧರ್ಮವೇ, ಭಾರತದಲ್ಲಿಯೂ ಹೇಳಿರುವುದು; ವೇದದಲ್ಲಿ ಬರುವ ಹಲವು ಕಥೆಗಳು ಭಾರತ ದಲ್ಲಿ ಬರುತ್ತವೆ.

ಭಾರತವೆಂದರೆ ಭರತವಂಶದ ರಾಜರಾದ ಕೌರವಪಾಂಡವರ ಕಥೆ. ಈ ಕಥೆಯನ್ನು ಅಷ್ಟೋ ಇಷ್ಟೋ ತಿಳಿಯದ ಭಾರತೀಯನಿಲ್ಲ; ಓದನ್ನು

ಅರಿಯದ ಹೆಂಗಸರು ಮಕ್ಕಳಿಗೂ ಇದು ಗೊತ್ತು ; ಪುರಾಣಗಳನ್ನು ಕೇಳಿ, ಹಾಡು ಹಸೆಗಳನ್ನು ಕೇಳಿ, ಬಯಲಾಟಗಳನ್ನು ನೋಡಿ, ಇವುಗಳನ್ನು ತಿಳಿದು ಕೊಂಡಿದ್ದಾರೆ. ಇಂದಿಗೂ ಭಾರತಕಥೆಯನ್ನು ಓದಿ ಬಲ್ಲವರಿಗಿಂತಲೂ ಕೇಳಿ ಬಲ್ಲವರೇ ಹೆಚ್ಚು ಜನ. ಅದು ಹೀಗೆ ಹರಡುವುದಕ್ಕೆ ಕಾರಣ ಮುಖ್ಯವಾಗಿ ನಮ್ಮ ಜನರ ಧರ್ಮಶ್ರದ್ಧೆ, ಮತ್ತು ಭಾರತದ ಸ್ವಾರಸ್ಯವಾದ ಕಥೆ. ಅದು 'ಪರಮವೇದದ ಸಾರ'; ಆದ್ದರಿಂದ ಇಹಪರ ಸಾಧಕವಾದದ್ದು.

ಇಷ್ಟು ದೊಡ್ಡ ಗ್ರಂಥವನ್ನು ಹಿಂದಿನವರು ಹೇಗೆ ಕಾಪಾಡಿಕೊಂಡು ಬಂದರೋ ! ಬಹುಕಾಲ ಅದನ್ನು ಪೌರಾಣಿಕರು ಬಾಯಿಗೆ ಗಟ್ಟಿಮಾಡಿ ಕೊಂಡು ಹೇಳುತ್ತಿದ್ದಿರಬೇಕು ; ವೇದವಂತೂ ಬಾಯಿಂದ ಬಾಯಿಗೆ ಬಂದದ್ದು ; ಹೀಗೆಯೇ ಎಷ್ಟೋ ಶಾಸ್ತ್ರಗಳೂ ಗಟ್ಟಿಮಾಡಿಕೊಂಡಿದ್ದು, ತಲೆ ಮಾರಿಂದ ತಲೆಮಾರಿಗೆ ಬಂದವು ; ನಮ್ಮ ಹಿರಿಯರು ಅವಕ್ಕಾಗಿ ಅಷ್ಟು ಶ್ರಮಪಡದಿದ್ದರೆ ಇಂದು ಅವು ನಮ್ಮಪಾಲಿಗೆ ಇರುತ್ತಿರಲಿಲ್ಲ ; ಬರವಣಿಗೆ ತಾನೇ ಸುಲಭವೇ ? ಭಾರತದ ಒಂದು ಲಕ್ಷ ಶ್ಲೋಕಗಳನ್ನು ಓಲೆಯ ಗರಿಯ ಮೇಲೆ ಕಂಠದಿಂದ ಕಿರುಕಬೇಕಾದರೆ ಸುಲಭವಲ್ಲ ; ಈಗ ಅಚ್ಚುಮನೆಗಳು ಬಂದು ನಾವು ಆ ಕಷ್ಟವನ್ನು ಊಹಿಸಲೂ ಆರೆವು. ಆದ್ದರಿಂದ ನಾವು ಮಹಾಭಾರತವನ್ನು ಬರೆದ ಮಹಾತ್ಮರಿಗೆ ಎಷ್ಟು ಕೃತಜ್ಞರಾಗಿರಬೇಕೋ, ಅದನ್ನು ಕಾಪಾಡಿಕೊಂಡು ಬಂದ ಹಿರಿಯರಿಗೂ ಅಷ್ಟೇ ಕೃತಜ್ಞರಾಗಿರಬೇಕು. ದೇವಸ್ಥಾನವನ್ನು ಪಾಳುಗೆಡವುವುದು ಸುಲಭ ; ಅದನ್ನು ಉಳಿಸಿಕೊಂಡು, ಬೆಳಸಿಕೊಂಡು, ಪೂಜೆನಡಸಿ ಪುಣ್ಯ ಪಡೆಯುವುದು ಕಷ್ಟ.

ಭಾರತ ಕಥೆಯನ್ನು ಮೊಟ್ಟಮೊದಲು ವೈಶಂಪಾಯನನೆಂಬ ಋಷಿಯು ಜನಮೇಜಯನಿಗೆ ಅವನು ಮಾಡುತ್ತಿದ್ದ ಸರ್ಪಯಾಗದ ಕಾಲದಲ್ಲಿ ಹೇಳಿದ ನಂತೆ ; ಆ ಕಥೆಯುನ್ನು ಆತನು ತನ್ನ ಗುರುವಾದ ವ್ಯಾಸರಿಂದ ಕೇಳಿದ್ದನು ; ಆದ್ದರಿಂದ ವ್ಯಾಸರೇ ಭಾರತದ ಮೂಲಕರ್ತರು ಎಂದು ಹೇಳುವುದು. ವ್ಯಾಸರು ಭರತಖಂಡದಲ್ಲಿ ಬಹು ಪೂಜ್ಯರಾದ ವ್ಯಕ್ತಿ ; ವೇದಗಳನ್ನೆಲ್ಲಾ ವಿಂಗಡಿಸಿ ಇಂದಿನ ರೂಪಕ್ಕೆ ತಂದವರೇ ಅವರು ಎಂದು ಹೇಳುತ್ತಾರೆ ; ಅದೇ ಒಂದು ಮಹತ್ವದ ಕೆಲಸ ; ಜೊತೆಗೆ ಭಾರತದಂಥ ಒಂದು ಹಿರಿಯ

ಗ್ರಂಥವನ್ನೂ ರಚಿಸಿದರೆಂದರೆ, ಅವರ ಸಾಮರ್ಥ್ಯವನ್ನೂ ತಪಶ್ಶಕ್ತಿಯನ್ನೂ ಊಹಿಸುವುದು ಮಾತ್ರ ಸಾಧ್ಯ. ಆ ಕೆಲಸದಲ್ಲಿ ಒಂದು ಸಣ್ಣಪಾಲು ಕೆಲಸ ಮಾಡಿದರೂ ಇಂದು ಅಗಾಧವಾದ ಕೀರ್ತಿ ಬರುತ್ತದೆ; ಐಶ್ವರ್ಯ ಬರುತ್ತದೆ. ಆದರೆ ವ್ಯಾಸರಾಗಲಿ ವೈಶಂಪಾಯನನಾಗಲಿ ದುಡ್ಡಿಗೋ ಯಶಸ್ಸಿಗೋ ಆಶೆಪಟ್ಟು ಇದನ್ನು ಮಾಡಿದವರಲ್ಲ. ವೈಶಂಪಾಯನನು ಹೇಳಿದ ಕಥೆಯನ್ನು ಕೇಳಿದ್ದ ಸೂತಪುರಾಣಿಕನು ಅದನ್ನು ನೈಮಿಷಾರಣ್ಯದಲ್ಲಿ ಶೌನಕ ಮುಂತಾದ ಋಷಿಗಳಿಗೆ ಹೇಳಿದನಂತೆ. ಅದು ಇಂದು ನಮಗೆ ಬಂದಿದೆ. ಇದೆಲ್ಲಾ ಭಾರತದ ಪೀಠಿಕಾಭಾಗದಿಂದ ತಿಳಿಯಬರುತ್ತದೆ.

ಮೇಲೆ ಹೇಳಿದ ಜನಮೇಜಯನು ಪಾಂಡವರ ಮರಿಮಗ; ಅರ್ಜುನನ ಮಗ ಅಭಿಮನ್ಯು, ಅಭಿಮನ್ಯುವಿನ ಮಗ ಪರಿಕ್ಷಿದ್ರಾಜ, ಪರಿಕ್ಷಿತ್ತಿನ ಮಗ ಜನಮೇಜಯ. ಪರಿಕ್ಷಿತ್ತು ಒಂದು ದಿನ ಕಾಡಿನಲ್ಲಿ ಬೇಟೆಗೆ ಹೋಗಿದ್ದು, ಅಲ್ಲಿ ತಪಸ್ಸು ಮಾಡುತ್ತಿದ್ದ ಒಬ್ಬ ಋಷಿಯನ್ನು ನೋಡಿ ಕುಚೇಷ್ಟೆಗಾಗಿ, ಆವನ ಕೊರಳಿಗೆ ಒಂದು ಸತ್ತ ಹಾವನ್ನು ಹಾರ ಹಾಕಿದನಂತೆ ; ಅದನ್ನು ಕಂಡ ಆ ಋಷಿಯ ಮಗನು ಪರಿಕ್ಷಿದ್ರಾಜನು ಹಾವು ಕಡಿದು ಸಾಯಲೆಂದು ಶಾಪಕೊಟ್ಟನಂತೆ. ಅದರಂತೆ, ಎಷ್ಟೋ ಎಚ್ಚರದಿಂದ ಇದ್ದರೂ, ಆ ದೊರೆಯು ಹಾವು ಕಡಿದು ಸತ್ತುಹೋದನಂತೆ; ಆ ಸೇಡಿನಿಂದ ಅವನ ಮಗನಾದ ಜನಮೇಜಯನು ಹಾವುಗಳನ್ನೆಲ್ಲಾ ಧ್ವಂಸಮಾಡುತ್ತೇನೆಂದು ಒಂದು ಹಾವಿನ ಯಜ್ಞವನ್ನು ಮಾಡಿದನಂತೆ. ಬಹು ಹಾವುಗಳು ಅದರಲ್ಲಿ ಸತ್ತುಹೋದುವು; ಇನ್ನೂ ಎಷ್ಟು ಸಾಯುತ್ತಿದ್ದುವೊ! ಆದರೆ ಮಧ್ಯದಲ್ಲಿ ಆಸ್ತೀಕನೆಂಬ ಬ್ರಾಹ್ಮಣನು ಬಂದು ಆ ಯಜ್ಞವನ್ನು ನಿಲ್ಲಿಸಬೇಕೆಂದು ಪ್ರಾರ್ಥಿಸಿಕೊಳ್ಳಲು ಯಜ್ಞ ನಿಂತಿತಂತೆ. ಆ ಯಜ್ಞಕ್ಕಾಗಿ ಹಲವರು ಋಷಿಗಳು ಸೇರಿದ್ದರು; ಅವರಲ್ಲಿ ಒಬ್ಬೊಬ್ಬರು ಒಂದೊಂದು ಕಥೆ ಹೇಳುತ್ತಿದ್ದರು ; ಭಾರತ ಕಥೆಯೂ ಹೀಗೆ ಆಗ ಹೇಳಿದ್ದು. ತನ್ನ ಪೂರ್ವಿಕರ ಕಥೆಯಾದ್ದರಿಂದ ಜನಮೇಜಯನಿಗೂ ಅದರಲ್ಲಿ ತುಂಬ ಆಸಕ್ತಿ ಇದ್ದಿರಬೇಕು.

ಸಂಸ್ಕೃತ ಭಾರತವು ಬಹುಮಟ್ಟಿಗೆ ಶ್ಲೋಕದಲ್ಲಿದೆ; ಶ್ಲೋಕವೆಂಬುದು ಒಂದು ಸಣ್ಣ ಪದ್ಯ:

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ |
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ||

ಎಂಬುದು ಒಂದು 'ಶ್ಲೋಕ;' ಇದು ಮಹಾಭಾರತದ ಮೊಟ್ಟಮೊದಲಲ್ಲಿ ಬರುವ ಮಂಗಳಶ್ಲೋಕ; ಕನ್ನಡದಲ್ಲಿ ಎಷ್ಟೋ ಸಂಸ್ಕೃತ ಪದ್ಯ ಜಾತಿಯು ಕಾವ್ಯಗಳಲ್ಲಿ ಒಳಸಿ ಬಂತು; ಶ್ಲೋಕ ಮಾತ್ರ ಹೊಂದಿಬರಲಿಲ್ಲ; ಸಂಸ್ಕೃತಕ್ಕೆ ಅದು ನೀರು ಕುಡಿದಹಾಗೆ; ಕನ್ನಡಕ್ಕೆ ಷಟ್ಪದಿ ಸಾಂಗತ್ಯಗಳು ಹಾಗೆ; ನಾರಣಪ್ಪನು ತನ್ನ ಭಾರತವನ್ನು ಬರೆದದ್ದು ಭಾಮಿನೀ ಷಟ್ಪದಿಯಲ್ಲಿ; ಇನ್ನೊಬ್ಬ ಜೈನಕವಿ ಭರತೇಶ ವೈಭವವೆಂಬ ಬಹು ದೊಡ್ಡ ಕಾವ್ಯವನ್ನು ಆದ್ಯಂತವಾಗಿ 'ಸಾಂಗತ್ಯ'ದಲ್ಲಿ ಬರೆದನು. ಅದಿರಲಿ; ಸಂಸ್ಕೃತ ಭಾರತವು ಬಹುಮಟ್ಟಿಗೆ ಶ್ಲೋಕದಲ್ಲಿದೆ; ಸಂವಾದರೂಪದಲ್ಲಿದೆ. ಇತರ ವಿಧವಾದ ಪದ್ಯಜಾತಿಗಳೂ ಕೆಲವು ಇವೆ; ಅಲ್ಪ ಸ್ವಲ್ಪ ಗದ್ಯವೂ ಇದೆ; ಒಟ್ಟಿನ ಮೇಲೆ ಅದು ಪದ್ಯಗ್ರಂಥ. ಈಗಿನ ಕಾಲದಲ್ಲಿ ನಾವು ಗದ್ಯ ಬರೆಯು ವುದೇ ಹೆಚ್ಚು; ಅದರಲ್ಲಿಯೂ ಕಥೆಯನ್ನು ಹೇಳುವುದು ವಚನದಲ್ಲಿ, ಬರೆಯು ವುದು ಗದ್ಯದಲ್ಲಿ; ಯಾರೋ ಕೆಲವರು, ಪದ್ಯದಲ್ಲಿ ಬರೆದರೆ ಹೇಗಿರುತ್ತದೆ ನೋಡೋಣ ಎಂದು ಪದ್ಯದಲ್ಲಿಯೂ ಕಥೆ ಬರೆಯುತ್ತಿದ್ದಾರೆ; ಹಿಂದೆ ಪ್ರಾಯಿಕವಾಗಿ ಎಲ್ಲಾ ಗ್ರಂಥಗಳೂ—ವೇದ, ಶಾಸ್ತ್ರ, ಕೊನೆಗೆ ನಿಘಂಟು—ಪದ್ಯದಲ್ಲಿಯೇ ಇರುತ್ತಿದ್ದುವು; ಇದರಿಂದ, ಅದನ್ನು ಗಟ್ಟಿಮಾಡಿ ಜ್ಞಾಪಕ ದಲ್ಲಿಟ್ಟುಕೊಳ್ಳುವುದು ಸುಲಭವಾಗಿತ್ತು.

ಭಾರತದ ಕಥೆ ಬಹು ದೊಡ್ಡದು; ಆದ್ದರಿಂದ ಅದನ್ನು ಹದಿನೆಂಟು 'ಪರ್ವ'ಗಳಾಗಿ ವಿಭಾಗಮಾಡಿದೆ; ರಾಮಾಯಣದಲ್ಲಿ ಈ ವಿಭಾಗಗಳನ್ನು 'ಕಾಂಡ'ವೆಂದು ಕರೆದಿದೆ; ಜೈಮಿನಿಭಾರತ ಮುಂತಾದ ಈಚಿನ ಗ್ರಂಥ ಗಳಲ್ಲಿ 'ಸಂಧಿ' ಎನ್ನುವುದು ಒಂದು 'ಅಧ್ಯಾಯ.' ಅಂಥ ಹಲವು ಅಧ್ಯಾಯ ಗಳು ಸೇರಿ ಆಗುವ ಒಂದು ಭಾಗಕ್ಕೆ ಪರ್ವವೆಂದು ಹೆಸರು. ಪರ್ವವೆಂದರೆ ಗೆಣ್ಣು; ಉದ್ದವಾದ ಕಬ್ಬಿನ ಜಲ್ಲೆಯಲ್ಲಿ ಗೆಣ್ಣುಗಳು ಹೇಗೋ ಭಾರತದಲ್ಲಿ ಪರ್ವಗಳು ಹಾಗೆ. ಮುಂದೆ ಈ ಹದಿನೆಂಟು ಪರ್ವಗಳ ಹೆಸರನ್ನೂ ಅದರಲ್ಲಿ ನಡೆಯುವ ಕಥೆಯನ್ನೂ ಸೂಚಿಸಿದೆ:—

೧. **ಆದಿಪರ್ವ**—ಭಾರತ ಕಥೆಯ ಪೀಠಿಕೆ; ಕೌರವ ಪಾಂಡವರು ಹುಟ್ಟಿ ಬೆಳೆಯುತ್ತಾರೆ; ದುರ್ಯೋಧನನು ಹೊಟ್ಟೆಯಕಿಚ್ಚಿನಿಂದ ಪಾಂಡವರನ್ನು ಅರಗಿನ ಮನೆಯಲ್ಲಿರಿಸಿ ಅದಕ್ಕೆ ಬೆಂಕಿ ಇಡಿಸಿ ಅವರನ್ನು ಸುಡಿಸ ಬೇಕೆಂದಿರುತ್ತಾನೆ; ಅವರು ತಪ್ಪಿಸಿಕೊಂಡು ಹೋಗಿ ಅಲ್ಲಿ ಇಲ್ಲಿ ಅಲೆದು ಕೊನೆಗೆ ದ್ರೌಪದಿಯನ್ನು ಮದುವೆಯಾಗುತ್ತಾರೆ; ಆಗ ಧೃತರಾಷ್ಟ್ರನು ಅವರನ್ನು ಕರೆಸಿಕೊಳ್ಳುತ್ತಾನೆ.

೨. **ಸಭಾಪರ್ವ**—ಧರ್ಮರಾಜನು ರಾಜಸೂಯಯಾಗ ಮಾಡುತ್ತಾನೆ; ಆ ಯಾಗದ ವೈಭವವನ್ನು ನೋಡಿ ದುರ್ಯೋಧನನಿಗೆ ಹೊಟ್ಟೆಯಕಿಚ್ಚು ಹುಟ್ಟುತ್ತದೆ; ಜೂಜಿನಲ್ಲಿ ಪಾಂಡವರನ್ನು ಸೋಲಿಸಿ ಅವರನ್ನು ಕಾಡಿಗೆ ಕಳುಹಿಸುತ್ತಾನೆ.

೩. **ವನಪರ್ವ**—ಪಾಂಡವರು ಹನ್ನೆರಡುವರ್ಷ ಕಾಡಿನಲ್ಲಿ ಇರುತ್ತಾರೆ; ಅರ್ಜುನನು ಈಶ್ವರನಿಂದ ಪಾಶುಪತಾಸ್ತ್ರವನ್ನೂ, ಇಂದ್ರನಿಂದ ವರಗಳನ್ನೂ ಪಡೆದು ಬರುತ್ತಾನೆ. ಈ ಪರ್ವದಲ್ಲಿ ಹಲವು ಉಪಕಥೆಗಳು ಬರುತ್ತವೆ. ಅವೆಲ್ಲಾ ಮುಖ್ಯವಾಗಿ ಧರ್ಮರಾಜನ ಸಮಾಧಾನಕ್ಕಾಗಿ ಹೇಳಿದವು. ಸಾವಿತ್ರಿಯ ಕಥೆ, ನಳದಮಯಂತಿಯರ ಕಥೆ ಬರುವುದು ಇಲ್ಲಿಯೇ.

೪. **ವಿರಾಟಪರ್ವ**—ಪಾಂಡವರು ವೇಷ ಮರಸಿಕೊಂಡು ಒಂದು ವರ್ಷ ಇರಬೇಕಾಗಿತ್ತು; ಅದರಂತೆ ಅವರು ವಿರಾಟರಾಜನ ಹತ್ತಿರ ಇರುತ್ತಾರೆ; ಆಗ ದುರ್ಯೋಧನನು ವಿರಾಟನ ಗೋವುಗಳನ್ನು ಕದಿಯುವುದಕ್ಕೆ ಬರಲು ಅರ್ಜುನನು ಅವನನ್ನು ಸೋಲಿಸಿ ಓಡಿಸುತ್ತಾನೆ. ಅಂದಿಗೆ ಸರಿಯಾಗಿ ಪಾಂಡವರ ಅಜ್ಞಾತವಾಸ ಮುಗಿದಿರುತ್ತದೆ.

೫. **ಉದ್ಯೋಗಪರ್ವ**—ಉದ್ಯೋಗವೆಂದರೆ ಯತ್ನ; ಇದರಲ್ಲಿ ಎರಡು ಪಕ್ಷದವರೂ ಯುದ್ಧಕ್ಕೆ ಸಿದ್ಧಮಾಡಿಕೊಳ್ಳುತ್ತಾರೆ. ಕೃಷ್ಣನು ಸಂಧಿಮಾಡಿಸಿ ಯುದ್ಧ ತಪ್ಪಿಸೋಣವೆಂದು ನೋಡುತ್ತಾನೆ; ಆದರೆ ದುರ್ಯೋಧನನು ಪಾಂಡವರಿಗೆ ಒಂದು ಸೂಜಿಯ ಮೊನೆಯಷ್ಟು ನೆಲವನ್ನೂ ಕೊಡುವುದಕ್ಕೆ ಇಷ್ಟಪಡದೆ ಇದ್ದದ್ದರಿಂದ ಯುದ್ಧವಾಗಲೇ ಬೇಕಾಯಿತು.

೬. **ಭೀಷ್ಮಪರ್ವ**—ಇದರಲ್ಲಿ ಭೀಷ್ಮನು ಹತ್ತುದಿನ ಯುದ್ಧಮಾಡಿ ಬೀಳುತ್ತಾನೆ; ಯುದ್ಧಾರಂಭದಲ್ಲಿ ಅರ್ಜುನನು ನೆಂಟರಿಷ್ಟರ ಮೇಲೆ ಯುದ್ಧ ಮಾಡಲಾರೆನೆಂದು ಹಿಂತೆಗೆಯಲು ಕೃಷ್ಣನು ಅವನಿಗೆ ಬುದ್ಧಿಹೇಳಿ ಯುದ್ಧ ಮಾಡುವಂತೆ ಅವನನ್ನು ಪ್ರೇರಿಸುತ್ತಾನೆ. ಇದೇ ಲೋಕಪ್ರಸಿದ್ಧವಾದ 'ಭಗವದ್ಗೀತೆ.'

೭. **ದ್ರೋಣಪರ್ವ**—ದ್ರೋಣನು ಸೇನಾಪತಿಯಾಗಿ ಐದು ದಿನ ಯುದ್ಧ ನಡಸಿ ತನ್ನ ಮಗ ಅಶ್ವತ್ಥಾಮನು ಸತ್ತನೆಂದುಕೊಂಡು ಯುದ್ಧ ನಿಲ್ಲಿಸಿ ದೇಹಬಿಡುತ್ತಾನೆ. ಅಭಿಮನ್ಯುವನ್ನು ಸೈಂಧವನು ಕೊಲ್ಲಲು ಪ್ರತಿಯಾಗಿ ಅವನನ್ನು ಅರ್ಜುನನು ಕೊಲ್ಲುತ್ತಾನೆ.

೮. **ಕರ್ಣಪರ್ವ**—ಕರ್ಣನು ಸೇನಾಪತಿಯಾಗಿ ಎರಡು ದಿನ ಯುದ್ಧ ಮಾಡಿ ಸಾಯುತ್ತಾನೆ.

೯. **ಶಲ್ಯಪರ್ವ**—ಶಲ್ಯನು ಅರ್ಧದಿವಸ ಯುದ್ಧಮಾಡಿ ಸಾಯಲು, ದುರ್ಯೋಧನನು ಓಡಿಹೋಗಿ ಮಡುವಿನಲ್ಲಿ ಅಡಗಿಕೊಳ್ಳುತ್ತಾನೆ. ಪಾಂಡವರ ಮೂದಲಿಕೆಯಿಂದ ಅವನು ಹೊರಕ್ಕೆ ಬಂದು ಭೀಮನೊಡನೆ ಗದಾಯುದ್ಧ ಮಾಡಿ ತೊಡೆ ಮುರಿದು ಬೀಳುತ್ತಾನೆ.

೧೦. **ಸೌಪ್ತಿಕಪರ್ವ**—ಸೌಪ್ತಿಕ ಎಂದರೆ ನಿದ್ರೆಮಾಡುತ್ತಿರುವವರದು. ಯುದ್ಧ ನಿಂತಿತೆಂದು ಪಾಂಡವರ ಕಡೆಯವರೆಲ್ಲರೂ ನಿಶ್ಚಿಂತರಾಗಿ ರಾತ್ರಿ ನಿದ್ರೆಮಾಡುತ್ತಿರಲು, ಹೆಸರು ಹೇಳುವುದಕ್ಕೂ ಒಂದು ಪಿಳ್ಳೆ ಇಲ್ಲದಂತೆ ಅಶ್ವತ್ಥಾಮನು ಅವರೆಲ್ಲರನ್ನೂ ಕೊಂದುಹಾಕುತ್ತಾನೆ. ಪಾಂಡವರು ಆಗ ಅಲ್ಲಿ ಇಲ್ಲದ್ದರಿಂದ ಬದುಕಿಕೊಂಡರು.

ಹೀಗೆ ಭಾರತಯುದ್ಧ ಹದಿನೆಂಟು ದಿನ ನಡೆಯಿತು.

೧೧. **ಸ್ತ್ರೀಪರ್ವ**—ಇದರಲ್ಲಿ ಗಂಡಂದಿರನ್ನು ಕಳೆದುಕೊಂಡ ಹೆಂಗಸರೂ ಮಕ್ಕಳನ್ನು ಕಳೆದುಕೊಂಡ ಗಾಂಧಾರಿ ಧೃತರಾಷ್ಟ್ರರೂ ಗೋಳಾಡುತ್ತಾರೆ.

೧೨. **ಶಾಂತಿಪರ್ವ**—ಧರ್ಮರಾಜನಿಗೆ ಪಟ್ಟಾಭಿಷೇಕವಾಗುತ್ತದೆ. ಅವನು ಉತ್ತರಾಯಣ ಬರಲೆಂದು ಇನ್ನೂ ಜೀವಹಿಡಿದುಕೊಂಡಿದ್ದ ಭೀಷ್ಮನಿಂದ ಧರ್ಮವನ್ನು ಕೇಳುತ್ತಾನೆ.

**೧೩. ಅನುಶಾಸನಪರ್ವ**—ಭೀಷ್ಮನು ತನ್ನ ಧರ್ಮೋಪದೇಶವನ್ನು ಮುಂದುವರಿಸಿ, ಸಾಯುತ್ತಾನೆ.

**೧೪. ಅಶ್ವಮೇಧಪರ್ವ**—ಧರ್ಮರಾಜನು ಅಶ್ವಮೇಧಯಜ್ಞ ಮಾಡುತ್ತಾನೆ. ಈ ಭಾಗದ ಕಥೆಯೇ ಜೈಮಿನಿ ಭಾರತದಲ್ಲಿ ಇರುವುದು.

**೧೫. ಆಶ್ರಮವಾಸಪರ್ವ**—ಇದರಲ್ಲಿ ಧೃತರಾಷ್ಟ್ರ ಗಾಂಧಾರಿ ಕುಂತಿ ವಿದುರ ಸಂಜಯ ಇವರು ತಪಸ್ಸಿಗೆಂದು ಕಾಡಿಗೆ ಹೋಗಿ ಅಲ್ಲಿ ಕಾಡು ಕಿಚ್ಚಿಗೆ ಸಿಕ್ಕಿ ಸಾಯುತ್ತಾರೆ.

**೧೬. ಮೌಸಲಪರ್ವ**—ಮುಸಲವೆಂದರೆ ಒನಕೆ; ಒನಕೆಯೇ ಕಾರಣವಾಗಿ ಯಾದವರು ಹೊಡೆದಾಡಿ ಸಾಯುತ್ತಾರೆ; ಕೃಷ್ಣ ಬಲರಾಮರು ದೇಹಬಿಡುತ್ತಾರೆ.

**೧೭. ಮಹಾಪ್ರಸ್ಥಾನಪರ್ವ**—ಮಹಾ ಪ್ರಸ್ಥಾನವೆಂದರೆ ದೊಡ್ಡ ಪ್ರಯಾಣ; ಮಹಾಯಾತ್ರೆ; ಪಾಂಡವರು ತಮ್ಮ ರಾಜ್ಯವನ್ನು ಪರಿಕ್ಷಿತ್ತಿಗೆ ಕೊಟ್ಟು ಸ್ವರ್ಗಕ್ಕೆ ಪ್ರಯಾಣ ಹೊರಡುತ್ತಾರೆ; ದಾರಿಯಲ್ಲಿ ಒಬ್ಬೊಬ್ಬರಾಗಿ ಬಿದ್ದು ಧರ್ಮರಾಜನೊಬ್ಬನು ತನ್ನ ದೇಹದಲ್ಲಿಯೇ ಸ್ವರ್ಗಕ್ಕೆ ಹೋಗುತ್ತಾನೆ.

**೧೮. ಸ್ವರ್ಗಾರೋಹಣಪರ್ವ**—ಅಲ್ಲಿ ಧರ್ಮರಾಜನಿಗೆ ಮೊದಲು ನರಕ ದರ್ಶನವಾಗಿ ಆಮೇಲೆ ಸ್ವರ್ಗ ಲಭಿಸುತ್ತದೆ. ಕರ್ಣ ದುರ್ಯೋಧನರೂ ಕೂಡ ಕಾದಿ ಮಡಿದು, ಕ್ಷತ್ರಿಯ ಧರ್ಮವನ್ನು ನಡಸಿದ್ದರಿಂದ ಅವರಿಗೂ ವೀರಸ್ವರ್ಗ ಬರುತ್ತದೆ.

ಇದಾದ ಮೇಲೆ 'ಹರಿವಂಶ'ವೆಂಬ ಒಂದು ಭಾಗದಲ್ಲಿ ಕೃಷ್ಣನ ಚರಿತ್ರೆ ಬರುತ್ತದೆ; ಅದು ನಿಜವಾಗಿ ಭಾರತಕ್ಕೆ ಸೇರಿದ್ದಲ್ಲ.

ಮಹಾಭಾರತವು ಜನಮೇಜಯರಾಯನ ಕಾಲದ ಕಥೆಯೆಂದು ಹಳಸಲಾಗುವುದಿಲ್ಲ; ಅದು ಇಂದಿಗೂ, ಎಂದಿಗೂ, ಹೊಸದೇ. ಏಕೆಂದರೆ ದಾಯಾದರ ವ್ಯಾಜ್ಯ ಯಾವಾಗ ಇಲ್ಲ? ಕ್ಷತ್ರಿಯರ ಕಥೆಯಾದರೂ ಅದರಿಂದ ಎಲ್ಲ ಜಾತಿಯ ಜನರೂ, ಎಲ್ಲ ದೇಶದ ಜನರೂ ಕಲಿಯತಕ್ಕ ನೀತಿ ಬಹಳವಾಗಿ ಇದೆ. ಅದು ಕಥೆಯೊಡನೆ, ಮನಸ್ಸಿಗೆ ನಾಟುವಂತೆ, ಕಣ್ಣಿಗೆ ಕಟ್ಟುವಂತೆ, ಬೆರೆದುಬಂದಿದೆ. ಕಥೆ ಯಾರಿಗೆ ಬೇಡ? ಮಕ್ಕಳಿಂದ ಮುದುಕರವರೆಗೆ ಎಲ್ಲಾ

ಕಾಲದ ಎಲ್ಲಾ ದೇಶದ ಜನರಿಗೂ ಕಥೆ ಪ್ರಿಯವಾದದ್ದು. ಯಾವ ಕಾವ್ಯ ಜಾತಿಯಾಗಲಿ, ಅದರಲ್ಲಿ ಹೂರಣವಾಗಿ ಕಥೆ ಇದ್ದೇ ಇರುತ್ತದೆ. ಭಾರತದಲ್ಲಿ ಈ ಕಥೆಗಳ ಸಮಾರಾಧನೆ! ಅದರಲ್ಲಿ ಎಷ್ಟು ಬಗೆಯ, ಎಂಥೆಂಥ ರುಚಿಯ ಎಷ್ಟು ಕಥೆಗಳು ಬರುತ್ತವೆ!—ದೇವತೆಗಳ ಕಥೆ, ರಾಕ್ಷಸರ ಕಥೆ, ವೀರರ ಕಥೆ, ಪತಿವ್ರತೆಯರ ಕಥೆ, ಮೃಗ ಪಕ್ಷಿ ಹಾವು ಮುಂಗಸಿ ಮುಂತಾದ ಪ್ರಾಣಿಗಳ ಕಥೆ, ಪುರಾಣಕಥೆ, ಪುಣ್ಯಕಥೆ, ನೀತಿಕಥೆ, ಋಷಿಗಳ ಕಥೆ, ತಪಸ್ವಿಗಳ ಕಥೆ, ತ್ಯಾಗಿಗಳ ಕಥೆ, ಯೋಗಿಗಳ ಕಥೆ, ಉಪಶಾಂತರ ಕಥೆ, ಉಗ್ರರೂಪಿಗಳ ಕಥೆ, ಇತ್ಯಾದಿ. ಇವು ಮುಂದೆ ಬರುವ ಸಂಸ್ಕೃತ ಸಾಹಿತ್ಯಕ್ಕೂ ದೇಶಭಾಷಾ ಸಾಹಿತ್ಯಕ್ಕೂ ಆಧಾರವಾಗುತ್ತವೆ. ಹಲವು ದೇಶಾಂತರಗಳಿಗೂ ಹೋಗಿ ಆಯಾ ಭಾಷಾ ಸಾಹಿತ್ಯಗಳಿಗೆ ಸೇರಿಹೋಗಿವೆ. ಲೋಕಪ್ರಸಿದ್ಧವಾದ ಶಾಕುಂತಲ ನಾಟಕವು ಭಾರತದಲ್ಲಿ ಬರುವ ಒಂದು ಕಥೆಯ ಆಧಾರದ ಮೇಲೆ ಹುಟ್ಟಿದ್ದು. ಇಂಥ ಉಪಕಥೆಗಳನ್ನು ಉಪಾಖ್ಯಾನವೆಂದು ಕರೆಯುತ್ತಾರೆ. ಮತ್ತೊಂದು ವಿಶೇಷವೇನೆಂದರೆ, ರಾಮಾಯಣದ ಕಥೆಯೂ ಇದರಲ್ಲಿ ಇಂಥ ಒಂದು ಉಪಾಖ್ಯಾನವಾಗಿ ಬರುತ್ತದೆ. ಕೃಷ್ಣಲೀಲೆಗಳು ಸೂಚಿತವಾಗಿರುವುದಲ್ಲದೆ, ಕೃಷ್ಣನು ಅರ್ಜುನನ ಸಾರಥಿಯಾಗಿ, ಪಾಂಡವರ ಮಂತ್ರಿಯಾಗಿ, ಅವರನ್ನು ತನ್ನ ಪ್ರಾಣಕ್ಕಿಂತ ಹೆಚ್ಚಾಗಿ ಕಂಡುಕೊಂಡು, ಭಾರತವನ್ನು ನಡಸುತ್ತಾನೆ. ಆದ್ದರಿಂದ ಭಾರತದಲ್ಲಿ ರಾಮಾಯಣ ಭಾಗವತಗಳೆರಡೂ ಅಡಕವಾಗಿವೆ. ಅರ್ಜುನನಿಗೆ ನಾರಾಯಣನ ಅವತಾರವಾದ ಕೃಷ್ಣನು ಹೇಗೆ ಆಪ್ತನೋ ಶಿವನೂ ಹಾಗೇ ಆಪ್ತ: ಅವನ ಶೌರ್ಯವನ್ನು ಮೆಚ್ಚಿ ಅವನಿಗೆ ಪಾಶುಪತಾಸ್ತ್ರವನ್ನು ಕೊಟ್ಟವನು. ಆದ್ದರಿಂದ ಭಾರತವು ಶೈವರಿಗೂ ವೈಷ್ಣವರಿಗೂ ಒಂದೇ ಸಮನಾಗಿ ಪೂಜ್ಯವಾಗಿದೆ. ಭರತಖಂಡದಲ್ಲಿ ಹಿಮಾಲಯದಿಂದ ಕನ್ಯಾಕುಮಾರಿಯ ವರೆಗೆ ಎಲ್ಲರೂ ಅದನ್ನು ಮೆಚ್ಚುವವರೇ, ಗೌರವಿಸುವವರೇ. ಭಾರತೀಯರಾದ ನಾವೆಲ್ಲಾ ಒಂದೇ ಎಂಬ ಭಾವನೆ ಉಂಟಾಗಲು, ಭಾರತ ರಾಮಾಯಣಗಳಿಂದ ತುಂಬ ಸಹಾಯವಾಗಿದೆ. ಅವು ಕಾಶಿ ರಾಮೇಶ್ವರಗಳ ಹಾಗೆ ಹಿಂದೂಜನರಿಗೆ ಪುಣ್ಯತೀರ್ಥಗಳು.

ಭಾರತವು ಕ್ಷತ್ರಿಯರ ಕಥೆ, ಯುದ್ಧದ ಕಥೆ. ಆದ್ದರಿಂದ ಅದರಲ್ಲಿ ಶೂರರ ವೀರಕಾರ್ಯಗಳು ಚಿತ್ರಿತವಾಗಿವೆ. ಪಾಂಡವರಷ್ಟೇ ಶೂರರು ಕೌರವರು; ಅವರೊಡನೆ ಕಾದಲು ಪಾಂಡವರು ಬಹುಕಾಲ ಸಿದ್ಧತೆ ಮಾಡಿಕೊಂಡು ಪಡೆ ಕಟ್ಟಿಕೊಳ್ಳಬೇಕಾಯಿತು. ಪಾಂಡವರ ಕಡೆಗಿಂತ ಕೌರವರ ಕಡೆಯೇ ಹೆಚ್ಚು ಸೇನೆಯಿತ್ತು. ಪಾಂಡವರ ಕಡೆ ಏಳು ಅಕ್ಷೌಹಿಣಿ, ಕೌರವರ ಕಡೆ ಹನ್ನೊಂದು ಅಕ್ಷೌಹಿಣಿ; ಇವಷ್ಟೂ ನಿರ್ನಾಮವಾಯಿತು. "ಏಳೂ ಹನ್ನೊಂದೂ ಆಗಿ ಹೋಯಿತು!" ಎಂದು ಹೇಳುವುದರ ಅರ್ಥ ಇದೇಯೆ. ಅಕ್ಷೌಹಿಣಿಯೆಂದರೆ ೨೧,೮೭೦ ರಥ, ಅಷ್ಟೇ ಆನೆ, ಅದರ ಮೂರರಷ್ಟು ಕುದುರೆ, ಐದರಷ್ಟು ಕಾಲಾಳು. ಈ ಸೇನೆಯನ್ನು ತಂದಿದ್ದ ಸಾವಿರಾರು ಸಾಮಂತರಾಜರೂ ಈ ಯುದ್ಧದಲ್ಲಿ ಹೆಸರಿಲ್ಲದಂತಾಗುತ್ತಾರೆ; ಯಾದವರೂ ಕುಡಿದು ಮತ್ತರಾಗಿ ತಮ್ಮಲ್ಲಿ ತಾವೇ ಹೊಡೆದಾಡಿ ಸಾಯುತ್ತಾರೆ; ಆದ್ದರಿಂದ ಕೊನೆಗೆ ಕಂಡು ಬರುವುದು ವೀರರ ಉತ್ಸಾಹವಲ್ಲ, ಈ ಸರ್ವನಾಶದ ಚಿಂತೆಯಿಂದ ಬರುವ ನಿರುತ್ಸಾಹ. ಮಧ್ಯಮಧ್ಯೆ ಶೃಂಗಾರ, ಹಾಸ್ಯ ಮುಂತಾದ ಇತರ ರಸಗಳೂ ಬರುತ್ತವೆ. ಆದರೆ ಭಾರತವನ್ನು ಓದಿ ಮುಚ್ಚಿಟ್ಟರೆ ಮನಸ್ಸಿಗೆ ಒಂದು ವಿಧವಾದ ವೈರಾಗ್ಯ ಬರುತ್ತದೆ. ಇದನ್ನು ಈಗ್ಗೆ ಸುಮಾರು ಒಂದು ಸಾವಿರ ವರ್ಷದ ಕೆಳಗೆ ಕಾಶ್ಮೀರದಲ್ಲಿದ್ದ ಕ್ಷೇಮೇಂದ್ರನೆಂಬ ಕವಿಯು ಒಂದು ಶ್ಲೋಕದಲ್ಲಿ ಹೇಳಿದ್ದಾನೆ:—

ರತ್ನೋದಾರಚತುಸ್ಸಮುದ್ರರಶನಾಂ ಭುಕ್ತ್ವಾ ಭುವಂ ಕೌರವೋ
ಭಗ್ನೋರುಃ ಪತಿತಃ ಸ ನಿಷ್ಪರಿಜನೋ ಜೀವನ್ ವೃಕೈರ್ಭಕ್ಷಿತಃ |
ಗೋಪೈರ್ವಿಶ್ವಜಯೀ ಜಿತಃ ಸ ವಿಜಯಃ ಕಕ್ಷ್ಯಾಃ ಕ್ಷಿತಾ ವೃಷ್ಣಯಃ
ತಸ್ಮಾತ್ ಸರ್ವಮಿದಂ ವಿಚಾರ್ಯ ಸುಚಿರಂ ಶಾಂತ್ಯೈ ಮನೋ ದೀಯತಾಂ ||

ಅರ್ಥ:—ಕೌರವನು ನಾಲ್ಕು ಸಮುದ್ರಗಳೇ ಕೊನೆಯಾದ ಭೂಮಂಡಲವನ್ನು ಆಳಿ, ಕೊನೆಗೆ ತೊಡೆ ಮುರಿಸಿಕೊಂಡು ಬಿದ್ದನು; ಹತ್ತಿರ ಒಬ್ಬರೂ ಇಲ್ಲದಂತಾಗಿ, ಬದುಕಿದ್ದಾಗಲೇ ಅವನನ್ನು ತೋಳಗಳು ಕಿತ್ತುಕೊಂಡು ತಿಂದುವು. ಪ್ರಪಂಚವನ್ನೆಲ್ಲಾ ಗೆದ್ದು 'ವಿಜಯ'ನೆನ್ನಿಸಿಕೊಂಡ ಅರ್ಜುನನು ಕೊನೆಯಲ್ಲಿ ದನಕಾಯುವವರಿಗೆ ಸೋತನು. ಯಾದವರು ಕಕ್ಷಿ ಪ್ರತಿಕಕ್ಷಿ

ಗಳಾಗಿ ನಿಂತು ಹೊಡೆದಾಡಿ ಹಾಳಾದರು. ಆದ್ದರಿಂದ ಇದೆಲ್ಲವನ್ನೂ ವಿಚಾರ ಮಾಡಿ ಶಾಂತಿಯ ಕಡೆಗೆ ಮನಸ್ಸುಕೊಡಿ !

'ಅಂತು ಇಂತು ಕುಂತಿಯ ಮಕ್ಕಳಿಗೆ ರಾಜ್ಯವಿಲ್ಲ' ಎಂದು ಕನ್ನಡದಲ್ಲಿ ಒಂದು ಗಾದೆಯಿದೆ. ಇದು ಸ್ವಲ್ಪಮಟ್ಟಿಗೆ ನಿಜ. ಮೊದಮೊದಲು ಪಾಂಡವರಿಗೆ ರಾಜ್ಯವಿರಲಿಲ್ಲ; ಆಮೇಲೆ ಬಂತು; ಬಂದರೂ ಅದನ್ನು ಅವರು ಹೆಚ್ಚುದಿನ ಅನುಭವಿಸಲಿಲ್ಲ; ಅದರ ಕಷ್ಟಸುಖಗಳೆಲ್ಲಾ ಸಾಕಾಗಿತ್ತು; ಆದ್ದರಿಂದ ರಾಜ್ಯವನ್ನೂ ಕೋಶವನ್ನೂ ಈ ಲೋಕವನ್ನೂ ಬಿಟ್ಟು ಸ್ವರ್ಗಕ್ಕೆ ಹೋದರು. ದುರ್ಯೋಧನನಿಗೆ ರಾಜ್ಯವಿದ್ದರೂ ಅವನು ಮುಳ್ಳಮೇಲೆ ಇದ್ದಂತೆ ಇದ್ದನು. ಪಾಂಡವರಿಗೆ ದ್ರೋಹಮಾಡಿ, ಮೋಸಮಾಡಿ, ಅವರನ್ನು ಕಾಡಿಗೆ ಓಡಿಸಿದನು; ಮತ್ತೆ ಕುಂಟುಯುಕ್ತಿ ತೆಗೆದು ಅವರನ್ನು ಕಾಡಿಗೆ ಅಟ್ಟಿ ತಾನು ಶಾಶ್ವತವಾಗಿ ರಾಜ್ಯವಾಳಿಕೊಂಡು ಇರಬೇಕೆಂಬುದು ಅವನ ಇಷ್ಟವಾಗಿತ್ತು. ಆದರೆ ಅನ್ಯಾಯ ಅಧರ್ಮ ಎಷ್ಟುದಿನ ನಿಲ್ಲುತ್ತದೆ? ದುಶ್ಶಾಸನ, ಶಕುನಿ, ಕರ್ಣ ಮುಂತಾದ ದುರ್ಮಂತ್ರಿಗಳು ಅವನ ಹತ್ತಿರ ಸೇರಿಕೊಂಡು ಅವನ ದುರ್ಬುದ್ಧಿಯನ್ನು ಹೆಚ್ಚಿಸಿದರು; ಧೃತರಾಷ್ಟ್ರನು ವಿವೇಕಿಯಾದರೂ ಮಗನ ಮೇಲಣ ಅಭಿಮಾನದಿಂದ ಅವನ ಕಡೆಯೇ ಸೇರಿಕೊಂಡನು; ವಿದುರನು ಆಡುತ್ತಿದ್ದ ವಿವೇಕದ ಮಾತುಗಳು ಯಾರಿಗೂ ರುಚಿಸಲಿಲ್ಲ. ಹೀಗಾಗಿ ದುರ್ಯೋಧನನು ತನ್ನ ದುರ್ಗುಣಗಳಿಂದ, ಒಂದು ದಿನವೂ ನೆಮ್ಮದಿಯೆಂಬುದನ್ನೇ ಕಾಣದೆ, ಅಕಾಲಮೃತ್ಯುವನ್ನು ಪಡೆದನು; ಘೋರಮರಣವನ್ನು ಹೊಂದಿದನು. ಸಾಯುವವನು ಒಬ್ಬ ಸತ್ತನೇ? ಕೌರವವಂಶವೇ ನಿರ್ನಾಮವಾಯಿತು; ಹೆಂಗಸರ, ಮಕ್ಕಳ, ದಿಕ್ಕಿಲ್ಲದವರ ಗೋಳು ದೇಶದಾದ್ಯಂತವೂ ತುಂಬಿಹೋಯಿತು. ರಾಜನನ್ನು ನಂಬಿದ ಪ್ರಜೆಗಳಿಗೆ ಇದೇ ಗತಿಯೇ? ಅವರ ಯೋಗಕ್ಷೇಮವನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ತನ್ನ ಆಶೆದುರಾಶೆಗಳನ್ನು ರಾಜನು ತ್ಯಜಿಸಬೇಕು. ರಾಜನು ಅನ್ಯಾಯಕ್ಕೆ, ಅಧರ್ಮಕ್ಕೆ, ಹೋಗಬಾರದು; ರಾಜನಂತೆಯೇ ಪ್ರಜೆಯೂ ಆಗುತ್ತದೆ; ರಾಜನು ಒಳ್ಳೆಯವನಾದರೆ ದೇಶವೂ ಒಳ್ಳೆಯದಾಗುತ್ತದೆ; ಅವನು ರಾಜರ್ಷಿಯೆನ್ನಿಸಿಕೊಳ್ಳುತ್ತಾನೆ; ಅವನ ತಪಸ್ಸಿನ ಫಲದಿಂದ ದೇಶದಲ್ಲಿ ಸುಭಿಕ್ಷವಾಗುತ್ತದೆ, ಕ್ಷೇಮ

ವಿರುತ್ತದೆ, ಸುಖವಿರುತ್ತದೆ, ಶಾಂತಿಯಿರುತ್ತದೆ. ಇದನ್ನೇ ಭಾರತವು 'ರಾಜಾ ಕಾಲಸ್ಯ ಕಾರಣಂ' ಎಂದು ಹೇಳುವುದು. ಜನರೂ ಧರ್ಮದಲ್ಲಿ ನಡೆಯ ಬೇಕು; ಧರ್ಮವೆಂದರೆ ಸರಿಯಾದದ್ದು, ನ್ಯಾಯವಾದದ್ದು. ಧರ್ಮದಿಂದಲೇ ಲೋಕ ನಿಂತಿರುವುದು, ನಡೆಯುತ್ತಿರುವುದು. ಇದಂತೂ ಭಾರತೀಯರಾದ ನಮ್ಮ ದೃಢವಾದ ನಂಬಿಕೆ.—

"ಯತೋ ಧರ್ಮಸ್ತತೋ ಜಯಃ"[1]

ನಾನು ಈಚೆಗೆ ಬರೆದು ಪ್ರಕಟಿಸಿದ **"ವಚನ ಭಾರತ"** ಗ್ರಂಥದ ಒಂದು ಪ್ರತಿಯನ್ನು ನನ್ನ ವಿದ್ಯಾಗುರುಗಳಾದ ಪ್ರೊ|| ಎಂ. ಹಿರಿಯಣ್ಣ ನವರಿಗೆ ಅರ್ಪಿಸಿದಾಗ ಅವರು ತುಂಬ ಸಂತೋಷಪಟ್ಟು "ಮಹಾಭಾರತದಲ್ಲಿ ಭಾರತೀಯ ಸಂಸ್ಕೃತಿಯನ್ನೆಲ್ಲಾ ಒಂದು ಉಂಡೆಯಾಗಿ ನೋಡಬಹುದು. ಆದ್ದರಿಂದ ಈ ಗ್ರಂಥವನ್ನು ಬರೆದು ಬಹು ಒಳ್ಳೆಯ ಕೆಲಸಮಾಡಿದಿರಿ!" ಎಂದರು. ಅದು ಸರ್ವಥಾ ಸತ್ಯವಾದ ಮಾತು. ಪ್ರಾಚೀನ ಭರತಖಂಡದ ಜನ ಜೀವನವನ್ನು ಮಥನಮಾಡಿದಾಗ ತೇಲಿದ ಬೆಣ್ಣೆಯ ಮುದ್ದೆ ಮಹಾ ಭಾರತ.—ಶುದ್ಧವಾದ, ಅಪ್ಪಟವಾದ, ನವನೀತ. ಏಕೆಂದರೆ ಮಹಾಭಾರತ ಹುಟ್ಟಿದಾಗ ಕ್ರೈಸ್ತ, ಬೌದ್ಧ, ಇಸ್ಲಾಂ ಸಂಸ್ಕೃತಿಗಳು ನಮ್ಮ ದೇಶಕ್ಕೆ ಇನ್ನೂ ಬಂದಿರಲಿಲ್ಲ. ಅವುಗಳಿಗೆ ಸ್ಥಾಪಕ (ಅಥವಾ ಪ್ರಕಾಶಕ) ರಾದ ಕ್ರಿಸ್ತ, ಬುದ್ಧ, ಪೈಗಂಬರ್ ಇವರೇ ಇನ್ನೂ ಹುಟ್ಟಿರಲಿಲ್ಲ. ಬೌದ್ಧ ಧರ್ಮವೂ ಭಾರತೀಯ ಧರ್ಮವೇ; ಬುದ್ಧ ಹುಟ್ಟಿದ್ದು ಭರತಖಂಡದಲ್ಲಿಯೇ, ಅದರ ಸಂಸ್ಕೃತಿಯ ಒಂದು ಫಲವಾಗಿಯೇ ಮತ್ತು ಅದರ ಹಿನ್ನೆಲೆಯಲ್ಲಿಯೇ; ಮಹಾಭಾರತವೂ ಸ್ವಲ್ಪಕಾಲಾನಂತರ ಬೌದ್ಧ ಧರ್ಮದ ನೆರೆಯಲ್ಲಿಯೇ ಬೆಳೆ ಯಿತು; ಇದರ ಸಾರವನ್ನು ಅದು ಹೀರಿದಂತೆ ಅದರ ಸಾರವನ್ನು ಇದು ಹೀರಿತು, ಬಲಿಯಿತು. ಆದರೂ ಪುರಾತನಾರ್ಯರ ಸಂಸ್ಕೃತಿ, ಪ್ರಾಚೀನ ಭಾರತೀಯ ಸಂಸ್ಕೃತಿ, ಮಹಾಭಾರತದಲ್ಲಿ ವ್ಯಕ್ತವಾಗುವಂತೆ ಮತ್ತಾವ ಗ್ರಂಥದಿಂದಲೂ ಆಗುವುದಿಲ್ಲ. ಆದ್ದರಿಂದ ಮಾನವ ಸಂಸ್ಕೃತಿಯ ಸ್ವರೂಪ

---

[1] ಪುಸ್ತಕ ಪ್ರಪಂಚ—ಫೆಬ್ರುವರಿ, ೧೯೫೦.

ವನ್ನು, ಚರಿತ್ರೆಯನ್ನು, ಅರಿಯಬೇಕೆನ್ನುವವರಿಗೆ ಮಹಾಭಾರತವು ಅಮೂಲ್ಯ ಮಾತೃಕೆಯಾಗಿದೆ.[1]

ಭಾರತದಲ್ಲಿ ಚಿತ್ರಿತವಾಗಿರುವುದು ಬಹುಮಟ್ಟಿಗೆ ಉತ್ತರ ಹಿಂದೂಸ್ಥಾನದ ಜೀವನ. ಅದರ ಕಥೆ ನಡೆದದ್ದು ಗಂಗಾ ಯಮುನಾ ನದಿಗಳ ಪ್ರದೇಶದಲ್ಲಿ; ಈಗ ದೆಹಲಿಯಾಗಿರುವ ಪ್ರದೇಶದಲ್ಲಿ ಕುರುಕ್ಷೇತ್ರವಿತ್ತು; ಕೌರವ ಪಾಂಡವರ ಯುದ್ಧ ನಡೆದದ್ದು ಅಲ್ಲಿಯೇ; ಆಗ ದಕ್ಷಿಣ ದೇಶವು 'ದಂಡಕಾರಣ್ಯ' ಎಂದರೆ ಉದ್ದಕ್ಕೆ ಹಬ್ಬಿಹೋಗಿದ್ದ ಕಾಡು; ಅದರ ವಿಚಾರ ಹೆಚ್ಚು ತಿಳಿದಿರಲಿಲ್ಲ. ಕಪಿಗಳೂ ರಾಕ್ಷಸರೂ ಅಲ್ಲಲ್ಲಿ ಒಬ್ಬಿಬ್ಬರು ಋಷಿಗಳೂ ಇರುತ್ತಿದ್ದರು. ಭಾರತವನ್ನು ಹೇಳಿದ ವ್ಯಾಸರು ಯಮುನಾ ನದಿಯ ಒಂದು ದ್ವೀಪದಲ್ಲಿ ಹುಟ್ಟಿದವರು; ಅದನ್ನು ಅವರ ಶಿಷ್ಯನಾದ ವೈಶಂಪಾಯನನು ಜನಮೇಜಯನಿಗೆ ತಕ್ಷಶಿಲೆಯಲ್ಲಿ ಹೇಳಿದನು. ಅದರೂ ಮಹಾಭಾರತವು ವೇದದಂತೆಯೇ ಉತ್ತರ ದೇಶಕ್ಕೆ ಮಾತ್ರವಲ್ಲ, ಎಲ್ಲ ಭರತಖಂಡಕ್ಕೂ ಬಂದ ದೊಡ್ಡ ಆಸ್ತಿಯಾಗಿದೆ. ಅದರ ಪ್ರಾಚೀನ ಸಂಸ್ಕೃತಿಯನ್ನು ಪ್ರತಿ ಬಿಂಬಿಸುವಉದ್ಗ್ರಂಥವಾಗಿದೆ.

'ಸಂಸ್ಕೃತಿ' ಯೆಂದರೆ, ಸಂಸ್ಕಾರ, ಉತ್ತಮ ಪರಿಣಾಮ. ಇದು ಇಂಗ್ಲಿಷಿನ 'ಕಲ್ಚರ್' ಎಂಬ ಮಾತಿಗೆ ಸಮಾನವಾಗಿ ಈಚೆಗೆ ಕನ್ನಡದಲ್ಲಿ ಇಟ್ಟುಕೊಂಡಿರುವ ಪದ. ಕಲ್ಚರ್ ಎಂದರೆ ಕೃಷಿ, ವ್ಯವಸಾಯ. ಕೃಷಿ ಮಾಡುವುದು ಭೂಸ್ಥಿತಿಯನ್ನು ಉತ್ತಮಗೊಳಿಸಿ, ಅದರಲ್ಲಿ ಬಿತ್ತನೆಮಾಡಿ ಫಲತೆಗೆಯುವುದಕ್ಕೆ; ಹಾಗೆಯೇ ನಮ್ಮ ಮನಸ್ಸು ಬುದ್ಧಿ ಆತ್ಮ ಈ ಕ್ಷೇತ್ರಗಳನ್ನು ಉತ್ತು ಬಿತ್ತಿ ಫಲ ಪುರುಷಾರ್ಥಗಳನ್ನು ಪಡೆಯುವುದು ಸಂಸ್ಕೃತಿ. ಕೇವಲ ದೇಹಸಂಸ್ಕಾರವು ಸಂಸ್ಕಾರವಲ್ಲ; ಅದನ್ನು ಮಾತ್ರ ಹೇಳಿಕೊಡುವುದು ಸಂಸ್ಕೃತಿಯಲ್ಲ. ಏಕೆಂದರೆ ಮನುಷ್ಯನು ದೇಹವಷ್ಟೇ ಅಲ್ಲ; ಅದರಲ್ಲಿಯೂ ಸ್ಥೂಲದೇಹಕ್ಕಿಂತ ಸೂಕ್ಷ್ಮ ದೇಹ ಹೆಚ್ಚಿನದು. ಒಳಗೆ ಆರೋಗ್ಯವಿದ್ದು ಶುದ್ಧವಾದ ರಕ್ತ ಚಿಮ್ಮುತ್ತಿದ್ದರೆ ಮುಖದಲ್ಲಿ ಕಳೆ ಇರುತ್ತದೆ; ಅದು ನಿಜವಾದ ಸಂಸ್ಕಾರ. ಒಳಗೆ ರೋಗವಿದ್ದು, ಕೆನ್ನೆಗೂ ತುಟಿಗೂ ರಂಗು ಬಳಿದುಕೊಂಡರೆ

---

[1] "Study of the *Mahabharatha* is indispensable for those who would learn to understand the spirit and culture of ancient India."
—L. D. Barnett.

ಅದೂ ಸಂಸ್ಕಾರವೆನ್ನಿಸಿಕೊಳ್ಳಬಹುದು ; ಆದರೆ ಅದು ಅಸ್ಥಿರ, ಅನೃತ, ಆಭಾಸ ; ನಿಜವಾದದ್ದಲ್ಲ. ಆದ್ದರಿಂದ ಒಂದು ದೇಶದ ಸಂಸ್ಕೃತಿಯನ್ನು ಆಲೋಚಿಸುವಾಗ ಅದರ ಜನ ಯಾವ ರೀತಿ ಬುದ್ಧಿ ಸಂಸ್ಕಾರವನ್ನೂ ವಿಕಾಸವನ್ನೂ ಪಡೆದರು, ಅದಕ್ಕೆ ಸಾಧಕವಾಗಿ, ಫಲವಾಗಿ, ಶಾಸ್ತ್ರ, ಸಾಹಿತ್ಯ, ಕಲೆ, ಧರ್ಮ, ಜ್ಞಾನ ಮುಂತಾದವು ಏನೇನು ಹುಟ್ಟಿದುವು ಎಂದು ವಿಚಾರ ಮಾಡಬೇಕು.

ಭಾರತೀಯ ಸಾಂಸ್ಕೃತಿಕ ಸಾಹಿತ್ಯವನ್ನು ವೇದ, ಶಾಸ್ತ್ರ, ಕಾವ್ಯ ಎಂದು ವಿಭಾಗಿಸುವುದು ರೂಢಿ. ವೇದವು ಅತ್ಯಂತ ಪ್ರಾಚೀನ ; ಮುಂದಿನ ಶಾಸ್ತ್ರ ಕಾವ್ಯ ಸಾಹಿತ್ಯಗಳಿಗೆಲ್ಲಾ ಅಲ್ಲಿಯೇ ಅಂಕುರವಿದೆ. ಶಾಸ್ತ್ರಗಳಲ್ಲಿ ವೇದಕ್ಕೆ ಅಂಗಗಳಾಗಿ, ಉಪಾಂಗಗಳಾಗಿ ಬೆಳೆದವು ಕೆಲವು ; ಅದಕ್ಕೇ ಅಷ್ಟು ನೇರವಾಗಿ ಸಂಬಂಧ ಪಡದೆ ಲೌಕಿಕವಾಗಿ ಬೆಳೆದವು ಕೆಲವು. ಕಾವ್ಯ ಸಾಹಿತ್ಯವೂ ಅಷ್ಟೇ. ಆದರೂ ಒಟ್ಟಿನಮೇಲೆ, ಹಿಂದೆ, ಮುಖ್ಯವಾಗಿ ನಮ್ಮ ದೇಶದಲ್ಲಿ "ಶುದ್ಧ" ಸಾಹಿತ್ಯ, ಕೇವಲ "ಲೌಕಿಕ" ಶಾಸ್ತ್ರ ಎಂಬುದಿರಲಿಲ್ಲ. ಭಾರತವು, ಕಾಲಾನುಕ್ರಮದಲ್ಲಿ, ವೇದಗಳಿಗೂ ಶಾಸ್ತ್ರಕಾವ್ಯಾದಿಗಳಿಗೂ ಮಧ್ಯೆ ಬರುತ್ತದೆ. (ಸುಮಾರು ಕ್ರಿ. ಪೂ. ೪೦೦) ಅದನ್ನು ಐದನೆಯ ವೇದ, ಇತಿಹಾಸ, ಇತಿಹಾಸ-ಪುರಾಣ ಎಂದು ಕರೆದಿದೆ. ಸಾಧಾರಣವಾಗಿ ಇತಿಹಾಸವು ಕ್ಷತ್ರಿಯರ ವೀರ ಚರಿತ್ರೆ ; ಹಿಂದೆ ಅದರ ಅರ್ಥ ಇನ್ನೂ ವಿಶಾಲವಾಗಿದ್ದು, ಅದು ಪುರಾಣ, ಚರಿತ್ರೆ, ಕಥೆ, ಉದಾಹರಣೆ, ಧರ್ಮಶಾಸ್ತ್ರ, ಅರ್ಥಶಾಸ್ತ್ರ ಇವೆಲ್ಲವನ್ನೂ ಒಳಗೊಂಡಿತ್ತು. ಇಂದಿಗೂ ಭಾರತ ಇರುವುದು ಹಾಗೆಯೇ. ಆದರೆ ಈಚೆಗೆ ದರ್ಶನಗಳೂ ಶಾಸ್ತ್ರಗಳೂ ಸ್ವತಂತ್ರವಾಗಿ ಬೆಳೆದು ವಿಸ್ತಾರವಾಗಿವೆ. ಆದರೂ ಅವುಗಳ ಮೂಲತತ್ವಗಳು ಭಾರತದಲ್ಲಿಯೇ ದೊರೆಯುತ್ತವೆ. (ಹೀಗೆ ಇಂದಿನ ರಾಜ್ಯಶಾಸ್ತ್ರವು ಶಾಂತಿಪರ್ವದಲ್ಲಿ ಉಕ್ತವಾದ ರಾಜಧರ್ಮಕ್ಕಿಂತ ಬಹಳವೇನೂ ಮುಂದುವರಿದಿಲ್ಲ ಎಂದು ಆ ಶಾಸ್ತ್ರದಲ್ಲಿ ಪ್ರವೀಣರಾದವರೊಬ್ಬರು ಹೇಳಿದ್ದಾರೆ.) ಇವುಗಳ ಜೊತೆಗೆ, ದೇವರು ಬೇಕೆನ್ನುವವರಿಗೆ ಇಂದ್ರ, ವರುಣ ಮುಂತಾದ ವೇದಕಾಲದ ದೇವತೆಗಳಿಂದ ಹಿಡಿದು ರಾಮ, ಕೃಷ್ಣ, ಶಿವ ಮುಂತಾದ ದೇವತೆಗಳೆಲ್ಲಾ ಬರುತ್ತಾರೆ ; ದರ್ಶನ ಬೇಕೆನ್ನುವವರಿಗೆ ಅದ್ವೈತ ವೇದಾಂತಕ್ಕೆ ಹತ್ತಿರ ಹತ್ತಿರ ಬರುವ,

ಆದರೆ ಸರ್ವಲೋಕ ಸಾಮಾನ್ಯವಾಗಬಲ್ಲ, ಸಾಂಖ್ಯವಿದೆ, ವೇದಾಂತವನ್ನೇ ಒಳಗೊಂಡ ಸನತ್ಸುಜಾತೀಯವಿದೆ, ಆಗಿನ ಕಾಲದ ನಾನಾ ಪಂಥಗಳನ್ನು, ಮುಖ್ಯವಾಗಿ ಕರ್ಮ ಭಕ್ತಿಮಾರ್ಗಗಳನ್ನು, ಒಳಗೊಂಡ ಲೋಕಪ್ರಸಿದ್ಧವಾದ ಭಗವದ್ಗೀತೆಯಿದೆ, ರಾಮಾಯಣದ ಕಥೆಯಿದೆ, ಭಾಗವತದ ಸಾರವಾದ ಶ್ರೀ ಕೃಷ್ಣಚರಿತ್ರೆಯಿದೆ.

"ಇಲ್ಲಿರುವುದೇ ಇತರ ಕಡೆಗಳಲ್ಲಿಯೂ ಇರುವುದು; ಇಲ್ಲಿಲ್ಲದಿರುವುದು ಇನ್ನೆಲ್ಲಿಯೂ ಇಲ್ಲ" ಎಂದು ಭಾರತದ ಅನುಕ್ರಮಣಿಕೆಯಲ್ಲೂ ಪರಿಸಮಾಪ್ತಿ ಶ್ಲೋಕಗಳಲ್ಲಿಯೂ ಹೇಳಿದೆ. ಇದು ಒಂದು ವಿಧದಲ್ಲಿ ನಿಜ. ಏಕೆಂದರೆ, ಭಾರತ ಹುಟ್ಟಿದಾಗ ಅದು ತನಗಿಂತ ಹಿಂದೆ ಇದ್ದ ವೇದ, ಸ್ಮೃತಿ, ಇತಿಹಾಸ, ಪುರಾಣಗಳ ಸಾರವನ್ನೆಲ್ಲಾ ಒಳಗೊಂಡಿತು; ವರ್ಣಾಶ್ರಮಧರ್ಮಗಳನ್ನೂ ಅದರಲ್ಲಿ ರಾಜಧರ್ಮವಾದ ರಾಜನೀತಿಯನ್ನೂ ಪ್ರತಿಪಾದಿಸಿತು. ಆಗ ಧರ್ಮಶಾಸ್ತ್ರ, ಅರ್ಥಶಾಸ್ತ್ರ, ಕಾಮಶಾಸ್ತ್ರ, ಶಿಲ್ಪಶಾಸ್ತ್ರ ಮುಂತಾದ ಲೌಕಿಕ ಶಾಸ್ತ್ರಗಳಾಗಲಿ, ತರ್ಕ, ಮೀಮಾಂಸ, ವೇದಾಂತ ಮುಂತಾದ ದರ್ಶನಗಳಾಗಲಿ, ಕಾಳಿದಾಸ, ಭವಭೂತಿ ಮುಂತಾದವರ ಕಾವ್ಯ ನಾಟಕಗಳಾಗಲಿ, ಇನ್ನೂ ಹುಟ್ಟಿರಲಿಲ್ಲ. ಈಚೆಗೆ ಹುಟ್ಟಿದ ಪುರಾಣಗಳು ಪುರಾಣ ಲಕ್ಷಣಗಳಿಗಿಂತ ಮುಂದೆ ಹೋಗಿ ನಾನಾ ವಿಚಾರಗಳನ್ನು ತುಂಬಿಕೊಳ್ಳುತ್ತ ಬಂದುವು. ಎಲ್ಲ ಜನಕ್ಕೂ ಇಹಪರ ಸಾಧಕವಾದ ಎಲ್ಲಾ ವಿಷಯಗಳೂ ತಿಳಿಯಬೇಕೆಂಬುದು ಅವುಗಳ ಉದ್ದೇಶ. ಅದಕ್ಕೆ ಹೀಗೆ ಜ್ಞಾನ ಭಂಡಾರವಾಗಲು ಹೆದ್ದಾರಿಯನ್ನು ತೋರಿಸಿದ್ದು ಮಹಾಭಾರತ.

ಮಹಾಭಾರತದಲ್ಲಿ ಪ್ರತಿಪಾದಿತವಾಗಿರುವ ವಿಷಯವನ್ನು ವ್ಯಾಸರು ಬ್ರಹ್ಮನಿಗೆ ಹೀಗೆ ಬಿನ್ನವಿಸಿದರಂತೆ :—

"ಇದರಲ್ಲಿ ಅನೇಕ ವೇದರಹಸ್ಯಗಳೂ, ಅದರಮೇಲೆ ನಾನು ನಿರ್ಧರಿಸಿರುವ ಸಿದ್ಧಾಂತಗಳೂ, ಷಡಂಗಗಳಿಂದಲೂ ಉಪನಿಷತ್ತುಗಳಿಂದಲೂ ಕೂಡಿದ ವೇದಗಳ ವಿವರಣೆಗಳೂ, ಕಾಲತ್ರಯ ವಿಚಾರಗಳು, ಜಾತಿ, ಮರಣ, ಭಯ, ವ್ಯಾಧಿ ಇವುಗಳ ಉತ್ಪತ್ತಿ ವಿನಾಶಗಳ ಸ್ವರೂಪ ನಿರ್ಣಯವೂ, ಬೇರೆ ಬೇರೆ ವರ್ಣಾಶ್ರಮ ಧರ್ಮಲಕ್ಷಣಗಳೂ, ತಪಸ್ಸಿನ ಮತ್ತು ಬ್ರಹ್ಮಚರ್ಯೆಯ ವಿಧಾನಗಳೂ, ಭೂಮಿಯ ಮತ್ತು ಚಂದ್ರ ಸೂರ್ಯರ ಗತಿಗಳೂ, ಗ್ರಹ ನಕ್ಷತ್ರ ತಾರೆಗಳ ವಿವಿಧ ಗತಿಗಳೂ, ಯುಗಪ್ರಮಾಣಗಳೂ, ಋಗ್ಯಜುಸ್ಸಾಮಗಳೆಂಬ ವೇದ

ತ್ರಯದಲ್ಲಿ ಪ್ರತಿಪಾದಿತವಾದ ಅಧ್ಯಾತ್ಮ ಜ್ಞಾನವೂ, ನ್ಯಾಯ ವೈದ್ಯಶಾಸ್ತ್ರಗಳೂ, ಜ್ಞಾನ ಸ್ವರೂಪವೂ, ಪಾಶುಪತವ್ರತವೂ, ದೇವಮನುಷ್ಯ ಜಾತಿಗಳೂ, ಅವುಗಳಿಂದ ಪಡೆಯತಕ್ಕ ಆಯಾ ಪ್ರಯೋಜನಗಳೂ, ಪುಣ್ಯಕರಗಳಾದ ತೀರ್ಥಕ್ಷೇತ್ರಗಳೂ, ನದೀ ನದ ಸಮುದ್ರ ಪರ್ವತಾರಣ್ಯಗಳೂ, ನಗರಗಳೂ, ಕಲ್ಪಭೇದಗಳೂ, ಯುದ್ಧ ಕೌಶಲಗಳೂ, ವಾಕ್ಯ ಜಾತಿ ವಿಶೇಷಗಳೂ, ಲೋಕ ಯಾತ್ರಾ ಕ್ರಮವೂ, ಸರ್ವವ್ಯಾಪಿಯೆಂದು ಪ್ರಸಿದ್ಧವಾದ ಯಾವ ವಸ್ತುವುಂಟೋ ಅದೂ (ಬ್ರಹ್ಮವೆಂಬ) ಈ ಗ್ರಂಥದಲ್ಲಿ ಪ್ರತಿಪಾದಿಸಲ್ಪಟ್ಟಿದೆ.''[1]

ಇವುಗಳಲ್ಲಿ ಯಾವ ಯಾವ ವಿಷಯಗಳು ಇಂದಿನ ಭಾರತ ಗ್ರಂಥದಲ್ಲಿ ಕಂಡುಬರುತ್ತವೆ, ಮೂಲದಲ್ಲಿ ಮೊಟ್ಟಮೊದಲು ಇದ್ದಿರಬಹುದಾದವು ಯಾವುವು ಎಂಬ ಚರ್ಚೆಗಾಗಲಿ, ಸಿದ್ಧಾಂತಕ್ಕಾಗಲಿ ಇಲ್ಲಿ ಅವಕಾಶವಿಲ್ಲ; ಪ್ರಾಚೀನರು ಭಾರತದಿಂದ ಏನೇನನ್ನು ನಿರೀಕ್ಷಿಸಿದ್ದರು ಎಂಬುದನ್ನು ಈ ವಿವರಣೆ ನಿರ್ದೇಶಿಸುತ್ತದೆ ಎಂದು ಇಟ್ಟುಕೊಂಡರೆ ಸಾಕು.

ಭಾರತೀಯ ಸಂಸ್ಕೃತಿಯ ಒಂದು ಮುಖ್ಯ ಲಕ್ಷಣ, ಹೊಸದೆಂದು ಯಾವುದು ಬಂದರೂ ಅದನ್ನು ಒಳಕೊಂಡು ಜೀರ್ಣಿಸಿಕೊಂಡು ಬೆಳೆಯುವುದು; ಅದನ್ನು ವಿರೋಧಿಸಿ ಹಾಳುಮಾಡುವುದೂ ಹಾಳಾಗುವುದೂ ಅಲ್ಲ. ತತ್ವ ಒಂದೇ, ಎರಡೇ, ನೂನ್ನೆಯೇ ಎಂಬ ಜಗಳ ಈಚಿನದು. ಮಹಾ ಭಾರತದಲ್ಲಿ ಪ್ರತಿಪಾದಿಸಿರುವ ತತ್ತ್ವ ಒಂದೂ ಆಗಬಹುದು, ಎರಡೂ ಆಗಬಹುದು; ಶಿವ, ವಿಷ್ಣು ಇಬ್ಬರೂ ಅದರ ದೃಷ್ಟಿಯಲ್ಲಿ ದೊಡ್ಡವರು; ವಿಶ್ವ ಚೈತನ್ಯದ ಅಭಿವ್ಯಕ್ತಿಗಳು. ಆದ್ದರಿಂದ ಅದು ಎಲ್ಲರಿಗೂ ಪೂಜ್ಯವಾದ ಗ್ರಂಥ ವಾಗಿದೆ; ಎಲ್ಲರನ್ನೂ ಒಂದಾಗಿ ಕೂಡಿಸಲು ಸಹಾಯಮಾಡುವ ಸಾಧನ ವಾಗಿದೆ. ಮಹಾಭಾರತದಲ್ಲಿ ಉಕ್ತವಾದ ಯೋಗಶಾಸ್ತ್ರವು ವೈದಿಕ ಧರ್ಮಕ್ಕೆ ವಿರುದ್ಧವೆನ್ನಿಸಿಕೊಂಡಿದ್ದ, ಬೌದ್ಧ ಜೈನ ಮತಗಳಿಗೂ ಅದಕ್ಕೂ ಸಾಮಾನ್ಯ ಧರ್ಮ. ಅದರ ಮೊದಲ ಮೆಟ್ಟಲಾದ 'ಅಹಿಂಸೆ' ಎಲ್ಲರಿಗೂ ಪರಮಧರ್ಮ. ಭರತಖಂಡದಲ್ಲಿ ಬೌದ್ಧಧರ್ಮ ನಷ್ಟವಾಗಲಿಲ್ಲ; ಹಂಚಿ ಅರಗಿ, ಅದೃಶ್ಯ ವಾಯಿತು. ಬುದ್ಧನು ದಶಾವತಾರಗಳಲ್ಲಿ ಒಬ್ಬನಾದನು. ಬೌದ್ಧರ ಎಷ್ಟೋ ಕಥೆಗಳು ಮಹಾಭಾರತದಲ್ಲಿಯೂ ಬೃಹತ್ಕಥೆಯಲ್ಲಿಯೂ ಬರುತ್ತವೆ. ಜೈನ

---

[1] ಪಂಡಿತ ದೇವಶಿಖಾಮಣಿ ಅಳಸಿಂಗರಾಚಾರ್ಯರ ಭಾಷಾಂತರ, ಆದಿಪರ್ವ (ಪ್ರಥಮ ಭಾಗ), ಪುಟ ೧೩.

ಪುರಾಣಗಳಲ್ಲಿ ರಾಮಾಯಣ ಭಾರತ ಭಾಗವತ ಕಥೆಗಳು ಬೆರಕೆ ಬರುತ್ತವೆ. ಇದಕ್ಕೆ ಮುಖ್ಯಕಾರಣ ಗುಣಪಕ್ಷಪಾತ, ತಾಳ್ಮೆ, ಧರ್ಮಬುದ್ಧಿ, ತತ್ತ್ವ ವಿವೇಚನೆ. ಸ್ವಾಮಿ ವಿವೇಕಾನಂದರು ಪಾಶ್ಚಾತ್ಯರನ್ನು ಕುರಿತು "ಕ್ರಿಸ್ತನು ನಿಮಗೆ ಅರ್ಥವಾಗುವುದಕ್ಕಿಂತ ಚೆನ್ನಾಗಿ ನಮಗೆ ಅರ್ಥವಾಗುತ್ತಾನೆ!" ಎಂದರು. ಇದು ಪ್ರಪಂಚದೊಡನೆ ಹೊಂದಿಕೊಂಡು ಹೋಗಬೇಕು ಎಂಬ ವಿಶಾಲ ಮನೋಧರ್ಮ ಉಳ್ಳವರ ನಡತೆ. ಇದನ್ನು ಇಂದು ಭರತಖಂಡವು ತನ್ನ ಒಳ ಆಡಳಿತದಲ್ಲಿಯೂ ನೆರೆಯ ನೀತಿಯಲ್ಲಿಯೂ ಅಂತರರಾಷ್ಟ್ರೀಯ ವ್ಯವಹಾರದಲ್ಲಿಯೂ ಅನುಸರಿಸಲು ಪ್ರಯತ್ನಪಡುತ್ತಿದೆ.

ಮಹಾಭಾರತವನ್ನು ಸಾಂಸಾರಿಕ ಕಥೆಯೆಂದೇ ನೋಡಿದರೂ ಅದು ತಂದೆತಾಯಿಗಳು, ಗಂಡಹೆಂಡಿರು, ಅಣ್ಣತಮ್ಮಂದಿರು, ಬಂಧುಬಳಗಗಳು, ಗುರುಹಿರಿಯರು, ಇವರ ಪರಸ್ಪರ ಹೊಂದಿಕೆಯನ್ನೇ ಬೋಧಿಸುತ್ತದೆ. ಸ್ನೇಹ ದಿಂದಲೇ ಸುಖ; ದ್ವೇಷ, ಮಾತ್ಸರ್ಯ, ನೀಚತನ ಇವುಗಳಿಂದ ಸುಖವಿಲ್ಲ ಎಂದು ಬೋಧಿಸುತ್ತದೆ. ಗಂಡಹೆಂಡಿರಲ್ಲಿ ಯಾರಾದರೂ ಒಬ್ಬರು, ಮುಖ್ಯ ವಾಗಿ ಹೆಂಗಸು, ತಾಳ್ಮೆಯಿಂದ ವರ್ತಿಸಿದರೆ ಆ ಸಂಸಾರ ಅಮೃತಮಯ ವಾಗುತ್ತದೆ. ಗಾಂಧಾರಿ, ಸಾವಿತ್ರಿ, ದಮಯಂತಿ ಮುಂತಾದವರು ಅಮರ ರಾಗಿರುವುದು ಇದರಿಂದ. ಪಾಂಡವರ ಸೋದರ ಸ್ನೇಹ ಎಲ್ಲ ಕಾಲಕ್ಕೂ ಎಲ್ಲರಿಗೂ ಮೇಲ್ಪಂಕ್ತಿ. ಮಹಾಭಾರತದಲ್ಲಿ ಕೊನೆಗೆ ಯುದ್ಧವೇನೋ ಆಯಿತು. ಆದರೆ ಅದನ್ನು ತಪ್ಪಿಸಿ ಸಂಧಿಮಾಡಿಸಲು ವಿವೇಕಿಗಳಾದವರೆಲ್ಲರೂ ಪ್ರಯತ್ನಮಾಡಿ ನೋಡಿದರು. ಮನಸ್ಸು ಚೆನ್ನಾಗಿದ್ದಾಗ ಎಲ್ಲರೂ ಸುಖ ವಾಗಿದ್ದರು; ದೇಶ ಸುಭಿಕ್ಷವಾಗಿತ್ತು; ಪ್ರಜೆ ನೆಮ್ಮದಿಯಾಗಿತ್ತು. ಅವಿವೇಕ ಪ್ರಬಲವಾದಾಗ, ಅಧರ್ಮ ಮೇಲ್ಗೈಯಾದಾಗ, ಸರ್ವನಾಶವಾಯಿತು. ಅದೂ ಜೀವಕ್ಕೆ ಒಂದು ಸಂಸ್ಕಾರವೇ, ಕಬ್ಬಿಣವನ್ನು ಕೆಂಪಗೆ ಕಾಯಿಸಿ ಕುಟ್ಟಿದ ಹೊರತು ಅದು ದಾರಿಗೆ ಬರುವುದಿಲ್ಲ. ಹೀಗೆ ದುರ್ಯೋಧನನಿಗೂ ಕೊನೆಗಾಲದಲ್ಲಿ ವಿವೇಕ ಹುಟ್ಟಿತು ಎಂದು ಹೇಳುತ್ತಾರೆ. ಪರಲೋಕದಲ್ಲಂತೂ ಅವನಿಗೆ ಪಾಂಡವರಂತೆಯೇ ವೀರಸ್ವರ್ಗ ಲಭಿಸಿತು.

ಕಷ್ಟ ಬರಲಿ ಸುಖ ಬರಲಿ, ದುಃಖವಾಗಲಿ ದುರಂತವಾಗಲಿ, ಏನೇ ಆದರೂ

ಧರ್ಮವನ್ನೇ ಹಿಡಿಯಬೇಕೇ, ಏನಾದರೂ ಆಗಲಿ ಸುಖವೊಂದನ್ನೇ ಪಡೆಯ ಬೇಕೇ, ಸಾಲವನ್ನಾದರೂ ಮಾಡಿ—ಆ ಸಾಲ ತೀರಿಸುವ ಯೋಚನೆ ಇಲ್ಲದೆ—ತುಪ್ಪ ಕುಡಿಯಬೇಕೇ ಎಂಬುದು ಲೌಕಿಕ ಸಮಸ್ಯೆ. ಏಕೆಂದರೆ ಎಲ್ಲರೂ ಹಾತೊರೆಯುವುದು ಸುಖಕ್ಕೆ. ಪರಲೋಕವನ್ನು ನಂಬಿರುವವರೆಲ್ಲರೂ—ಎಲ್ಲ ಕಾಲ ಎಲ್ಲ ದೇಶಗಳಲ್ಲಿಯೂ—ಸದ್ಗತಿ ದೊರೆಯುವುದು ಧರ್ಮದಿಂದ ಎಂದು ಹೇಳುತ್ತಾರೆ. ಆದರೆ ಧರ್ಮಮಾರ್ಗ ಕಷ್ಟದ ಮಾರ್ಗ, ಇಕ್ಕಟ್ಟಿನ ಮಾರ್ಗ. ಮಹಾಭಾರತವು ಈ ಅತಿಗಳನ್ನು ಬಿಟ್ಟು "ಅರ್ಥ ಕಾಮ ಗಳನ್ನು ಅಗತ್ಯವಾಗಿ ಪಡೆಯಿರಿ, ಆದರೆ ಅದು ಧರ್ಮಮಾರ್ಗದಿಂದ ಸಂಪಾ ದನೆ ಮಾಡಿದ್ದಾಗಲಿ; ಅದರಿಂದ ಇಹಪರಗಳೆರಡೂ ಲಭಿಸುತ್ತವೆ" ಎಂದು ಹೇಳುತ್ತದೆ. ಇತ್ಯಾಪಾರವನ್ನೆಲ್ಲಾ ಬಡಬಗ್ಗರ ಮುಂದೆ ಎಸೆದು ಶಿಲುಬೆ ಯನ್ನು ಹೊತ್ತುನಡೆದು ಅದರ ಮೇಲೆ ಮೊಳೆ ಹೊಡೆಸಿಕೊಂಡು ಸಾಯು ವುದಕ್ಕೆ ಸಿದ್ಧರಾಗಿರಿ ಎಂದೋ, ಕೈಹಿಡಿದ ಹೆಂಡತಿಯನ್ನೂ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳನ್ನೂ ತೊರೆದು ಹೋಗಿ ಎಂದೋ, ಅದು ಹೇಳುವುದಿಲ್ಲ. ನಮ್ಮ ಪಾಲಿಗೆ ಬಂದಷ್ಟು, ನಾವು ಪಡೆದಷ್ಟು, ಕಷ್ಟವನ್ನೋ ಸುಖವನ್ನೋ ಅನುಭವಿಸೋಣ; ಆದರೆ ಸುಖವನ್ನೇ ಗುರಿಯಾಗಿ ಮಾಡಿಕೊಂಡು ಅನ್ಯಾಯ ದಿಂದ ಅದನ್ನು ಪಡೆಯುವುದು ಬೇಡ; ಪ್ರತಿಯೊಬ್ಬರೂ ಈ ಮಾರ್ಗವನ್ನು ಹಿಡಿದರೆ ದೇಶವು ದರೋಡೆಕಾರರ ಕೊಂಪೆಯಾಗುತ್ತದೆ; ಅದರಲ್ಲಿ ಶಾಂತಿಯೂ ಇರುವುದಿಲ್ಲ, ಸುಖವೂ ಇರುವುದಿಲ್ಲ; ಅಪನಂಬಿಕೆ, ಭಯ ಇವೇ ತುಂಬಿರು ತ್ತವೆ; ಶಾಂತಿ ಇಲ್ಲದ ಸುಖ ಎಂಥ ಸುಖ? "ಅಶಾಂತಸ್ಯ ಕುತಸ್ಸುಖಂ?" (ಗೀತಾ ೨-೬೬) ಎಂದು ಹೇಳುತ್ತದೆ. ಶಾಂತಿಪರ್ವವೇ ಮಹಾಭಾರತದ ಹದಿನೆಂಟು ಪರ್ವಗಳಲ್ಲೆಲ್ಲಾ ಅತ್ಯಂತ ದೊಡ್ಡದು (೧೪೫೨೫ ಶ್ಲೋಕಗಳು).

ಅಧಿಕಾರದಿಂದ ಹೇಳಲಿ, ಅನುನಯದಿಂದ ತಿಳಿಸಲಿ, ಸ್ನೇಹದಿಂದ ಪ್ರೇರಿ ಸಲಿ, ನಮ್ಮ ಹಿತವರು ಹೇಳುವುದು ನಮ್ಮ ಹಿತಕ್ಕಾಗಿ; ಮತ್ತು ಸಾಹಿತ್ಯ ವೆನ್ನುವುದು ಮನುಷ್ಯರು ಮನುಷ್ಯರಿಗಾಗಿ ಮನುಷ್ಯ ಜೀವನದಲ್ಲಿ ಕಂಡ ದ್ದನ್ನೂ ಕೇಳಿದ್ದನ್ನೂ ಅನುಭವಿಸಿದ್ದನ್ನೂ ತಿಳಿಸುತ್ತದೆ. ಆದ್ದರಿಂದ, ಯಾವ ಸಾಹಿತ್ಯವಾಗಲಿ, ಯಾವ ಕಾಲದ್ದಾಗಲಿ, ದೇಶದ್ದಾಗಲಿ, ಮನುಷ್ಯನ

ಸಂಸ್ಕಾರಕ್ಕೆ ಸಹಾಯವಾಗತಕ್ಕದ್ದೇ; ಸಾಧಕವಾಗತಕ್ಕದ್ದೇ; ಅದು ಉಪಯೋಗಿಸಿಕೊಳ್ಳುವವರ ಯೋಗ್ಯತೆಯ ಮೇಲೆ ಹೋಗುತ್ತದೆ. ಆದ್ದರಿಂದ ಹಿಂದಿನವರು ಆಯಾ ಮಟ್ಟದ ಜನಕ್ಕೆ—"ಅಧಿಕಾರಿ" ಗಳಿಗೆ—ಬೇರೆ ಬೇರೆ ವರ್ಗದ ವಿದ್ಯಾರ್ಥಿಗಳಿಗೆ ಬೇರೆಬೇರೆ ಗ್ರಂಥಗಳನ್ನು ಪಠ್ಯವಾಗಿ ವಿಧಿಸುವಂತೆ—ವಿಭಾಗ ಮಾಡಿಟ್ಟರು; ಬರೆದರು; ವೇದ ಕೆಲವರಿಗೆ, ಶಾಸ್ತ್ರ ಕೆಲವರಿಗೆ, ಕಾವ್ಯ ಕೆಲವರಿಗೆ, ಅದರಲ್ಲಿ ಪದ್ಯ ಕೆಲವರಿಗೆ, ಗದ್ಯ ಕೆಲವರಿಗೆ, ನಾಟಕ ಕೆಲವರಿಗೆ. ಮಹಾಭಾರತದಲ್ಲಿ ವೇದಾರ್ಥವಿದೆ, ಶಾಸ್ತ್ರಾರ್ಥವಿದೆ; ಅದು ಕಾವ್ಯವೂ ಹೌದು—ಮಹಾ ಕಾವ್ಯ, ದೊಡ್ಡ ಕಾವ್ಯ, ಪರಮ ಪೂಜಿತ ವಾದ ಪರಮ ಪ್ರಾಚೀನವಾದ ಕಾವ್ಯ. ಮಹಾ ಕಾವ್ಯಗಳನ್ನು ಬರೆದ ಮಾಘ ಭಾರವಿ ಕಾಳಿದಾಸಾದಿಗಳೂ ಮಹಾಕಾವ್ಯಲಕ್ಷಣವನ್ನು ಹೇಳಿದ ದಂಡಿ ಭಾಮಹಾದಿಗಳೂ ಈಚಿನವರು. ಅದರ ಕಾಲದಲ್ಲಿ ನಾಟಕ, ಬಹುಶಃ, ಇನ್ನೂ ಹುಟ್ಟಿರಲಿಲ್ಲ. ಆದರೆ ಒಂದು ವಿಧದಲ್ಲಿ ಅದು ನಾಟಕವೇಯೆ. ಏಕೆಂದರೆ ಮಹಾಭಾರತವು ರಸಾರ್ಣವ, ಕಥೆಗಳ ಗಣಿ, ಲೋಕೋತ್ತರ ವ್ಯಕ್ತಿಗಳ ಪ್ರಪಂಚ. ಅದು ಇರುವುದು ಮೊದಲಿಂದ ಕೊನೆಯವರೆಗೆ, ಸಂಭಾಷಣೆಯ ರೂಪದಲ್ಲಿ.—ನಾಟಕದ ಜೀವಾಳ ಅದರ ಸಂಭಾಷಣೆ. ಪದ್ಯ ದಲ್ಲಿದ್ದರೂ ಅದು ಗದ್ಯಪ್ರಾಯ; ಗದ್ಯ ಬರುವುದು ಬಹು ಸ್ವಲ್ಪ; ಸರಳ; ಭಾಗವತದ ಗದ್ಯದಂತೆ ಕಷ್ಟವಲ್ಲ. ಇತಿಹಾಸವೆನ್ನಿಸಿಕೊಂಡರೂ ಇದರಲ್ಲಿ ಮಧುರವಾದ ಕಾವ್ಯರಸವೂ ಹಾಲಿನಂಥ ನೀತಿಯೂ ತುಂಬಿವೆ. ಇದು ದ್ರೌಪದಿಯು ಹೊತ್ತು ತಂದ ವೀರಕಲಶ.—ಆ ಒಬ್ಬ ದ್ರೌಪದಿ, ಒಬ್ಬ ಕೃಷ್ಣ, ಒಬ್ಬ ವಿದುರ ಸಾಕು, ವ್ಯಾಸರನ್ನು, ಭಾರತ ಸಾಹಿತ್ಯವನ್ನು, ಭಾರ ತೀಯ ಸಾಹಿತ್ಯವನ್ನು ಪ್ರಪಂಚದಲ್ಲಿ ಅಜರಾಮರವಾಗಿ ಮಾಡುವುದಕ್ಕೆ.

ಇಂಥ ಭಾರತದ ಕರ್ತೃವು ತೋಳೆತ್ತಿ 'ಅಯ್ಯೋ ನನ್ನ ಮಾತನ್ನು ಯಾರೂ ಕೇಳುತ್ತಿಲ್ಲವಲ್ಲ!' ಎಂದು ಸಂಸಾರದ ಹಿರಿಯನಂತೆ ನೊಂದುಕೊಂಡು 'ಧರ್ಮಾದರ್ಥಶ್ಚ ಕಾಮಶ್ಚ ಸ ಕಿಮರ್ಥಂ ನ ಸೇವ್ಯತೇ?' ಎಂದು ಕೂಗಿ ಸಾರುತ್ತಾನೆ. ಇದು ಭಾರತೀಯ ಸಂಸ್ಕೃತಿಯ ತಿರುಳು.—ಭಾರತ ಸಾವಿತ್ರಿ.[1]

[1] ಜೀವನ, ೧೫-೮-೧೯೫೦.

# ನಮ್ಮ ಪ್ರಕಟನೆಗಳು

## ಸಣ್ಣ ಕಥೆ, ಕಾದಂಬರಿಗಳು

ಚಂದ್ರಗುಪ್ತವಿಜಯ (ಮೂರನೆಯ ಮುದ್ರಣ)—
ಎಚ್. ಎಂ. ಶಂಕರನಾರಾಯಣರಾವ್, ಎಂ.ಎ. .... ೧ ೮ ೦

ಕಥಾವಲ್ಲರಿ—ತ. ಸು. ಶಾಮರಾಯ, ಎಂ.ಎ. (ಪ್ರತಿಗಳು ಮುಗಿದಿವೆ) ೧ ೮ ೦

ಮೈಥಿಲಿ—ಎಸ್. ಅನಂತನಾರಾಯಣ .... .... ೧ ೮ ೦

ರೋಮಿಯೋ ಮತ್ತು ಜೂಲಿಯೆಟ್—
ಎಚ್. ಎಂ. ಶಂಕರನಾರಾಯಣರಾವ್, ಎಂ.ಎ. .... ೦ ೧೨ ೦

ಎರಡನೆಯ ಕಾಣಿಕೆ—ಅಶ್ವತ್ಥ .... .... (ಅಚ್ಚಿನಲ್ಲಿ)

ಕ್ಯಾನ್‌ಡ್ರೈಡ್—ಟಿ. ಎಸ್. ರಾಮಸ್ವಾಮಯ್ಯ .... (ಅಚ್ಚಿನಲ್ಲಿ)

## ನಾಟಕಗಳು

ಪ್ರಸಾರ ನಾಟಕಗಳು—ಎಚ್. ಕೆ. ರಂಗನಾಥ್, ಎಂ.ಎ. .... ೧ ೮ ೦

ಕಾಶೀಯಾತ್ರೆ—ಕ್ಷೀರಸಾಗರ .... .... .... ೦ ೧೨ ೦

ಬಕ್ಕೀ ಲಕ್ಷ್ಮಣ್—ಕ್ಷೀರಸಾಗರ .... .... ೦ ೧೦ ೦

## ಸಂಗ್ರಹಗಳು

ಆದಿಪರ್ವ ಸಂಗ್ರಹ .... .... .... ೧ ೮ ೦

ಸಭಾಪರ್ವ ಸಂಗ್ರಹ .... .... .... ೨ ೦ ೦

ಅರಣ್ಯಪರ್ವ ಸಂಗ್ರಹ .... .... .... (ಅಚ್ಚಿನಲ್ಲಿ)

ವಿರಾಟಪರ್ವ ಸಂಗ್ರಹ .... .... .... ೨ ೦ ೦

ಉದ್ಯೋಗಪರ್ವ ಸಂಗ್ರಹ (ನಾಲ್ಕನೆಯ ಪರಿಷ್ಕೃತ ಮುದ್ರಣ) ೧ ೮ ೦

ಭೀಷ್ಮಪರ್ವ ಸಂಗ್ರಹ .... .... .... (ಅಚ್ಚಿನಲ್ಲಿ)

## ಕವಿತೆಗಳು

ಉಂಗುರ—ಕೆ. ಎಸ್. ನರಸಿಂಹಸ್ವಾಮಿ .... .... ೧ ೮ ೦

ಕರ್ಣ—ಎಮ್. ಎಸ್. ಅನಂತಪದ್ಮನಾಭರಾವ್ .... ೧ ೦ ೦

## ಸಾಹಿತ್ಯವಿಮರ್ಶೆ, ಪ್ರಬಂಧಗಳು, ಇತ್ಯಾದಿ

ಭಾಷಣಗಳು ಮತ್ತು ಲೇಖನಗಳು—

ಪ್ರೊ. ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ., ಭಾಗ—ಒಂದು .... ೩ ೦ ೦

ಭಾಗ—ಎರಡು .... ೪ ೦ ೦

ಭಾಸಕವಿ— .... .... .... .... ೨ ೮ ೦

ರತ್ನಾಕರವರ್ಣಿ—ತ. ಸು. ಶಾಮರಾಯ, ಎಂ.ಎ. .... ೦ ೮ ೦

ಹರಿಶ್ಚಂದ್ರ ಕಾವ್ಯಸಂಗ್ರಹದ ಕೈಗನ್ನಡಿ—

ಎಚ್. ಎಂ. ಶಂಕರನಾರಾಯಣರಾವ್, ಎಂ.ಎ. .... ೨ ೦ ೦

ಮೃಚ್ಛಕಟಿಕ—ಎಚ್. ಎಂ. ಶಂಕರನಾರಾಯಣರಾವ್, ಎಂ.ಎ. .... ೧ ೦ ೦

ಸಣ್ಣಕಥೆಯ ಸ್ವರೂಪ—ತ. ಸು. ಶಾಮರಾಯ, ಎಂ.ಎ. .... ೦ ೬ ೦

ಯಶೋಧರ ಚರಿತೆಯ ಸಂಗ್ರಹದ ವಿವರಣೆ— .... ೧ ೦ ೦

ಪ್ರಾಚೀನಸಾಹಿತ್ಯ—ಟಿ. ಎಸ್. ವೆಂಕಣ್ಣಯ್ಯ .... ೧ ೮ ೦

ಕನ್ನಡ ಧ್ವನ್ಯಾಲೋಕ—

ಡಾ|| ಕೆ. ಕೃಷ್ಣಮೂರ್ತಿ, ಎಂ.ಎ., ಬಿ.ಟಿ., ಪಿ.ಎಚ್.ಡಿ. (ಅಚ್ಚಿನಲ್ಲಿ)

ಕುಮಾರವ್ಯಾಸ—ಡಿ. ಎಲ್. ನರಸಿಂಹಾಚಾರ್, ಎಂ.ಎ. .... (ಅಚ್ಚಿನಲ್ಲಿ)

## ಚರಿತ್ರೆ

ರೋಮನ್ ಚಕ್ರಾಧಿಪತ್ಯದ ಚರಿತ್ರೆ—

ಡಾ|| ಎಸ್. ಶ್ರೀಕಂಠಶಾಸ್ತ್ರಿ, ಎಂ.ಎ., ಡಿ.ಲಿಟ್. .... ೧ ೮ ೦

ಗ್ರೀಕರ ಇತಿಹಾಸ—

ಡಾ|| ಎಸ್. ಶ್ರೀಕಂಠಶಾಸ್ತ್ರಿ, ಎಂ.ಎ., ಡಿ.ಲಿಟ್. .... (ಅಚ್ಚಿನಲ್ಲಿ)

## ಸಂಕೀರ್ಣ

ಧರ್ಮಶಿಕ್ಷಣ—ತ. ಸು. ಶಾಮರಾಯ, ಎಂ.ಎ. ಮತ್ತು

ಸಿ. ರಾಮಚಂದ್ರರಾವ್, ಬಿ.ಎ., ಬಿ.ಟಿ. .... ೨ ೮ ೦

ದರ್ಶನಗಳು—ವಿ. ಟಿ. ತಿರುನಾರಾಯಣ ಐಯಂಗಾರ್, ಎಂ.ಎ. ೦ ೧೦ ೦

**ಎಚ್. ಎಂ. ಶಂಕರನಾರಾಯಣರಾವ್, ಎಂ.ಎ.**

ಶಾರದಾವಿಲಾಸ ಕಾಲೇಜು, ಮೈಸೂರು.